ಕನ್ನಡ ಕವಿಕಾವ್ಯಮಾಲೆ—೬೨

# ಕೆಲವು ಇಂಗ್ಲಿಷ್ ಪ್ರಬಂಧಗಳು

ಎಸ್. ವಿ. ಪರಮೇಶ್ವರಭಟ್ಟ

ಪ್ರಕಾಶಕರು :

ಶಾರದಾಮಂದಿರ

ರಾಮಯ್ಯರ್ ರಸ್ತೆ, ಮೈಸೂರು

*Editor and Publisher*
H. M. SHANKAR NARAYAN RAO, M.A.
*Professor of Kannada,*
Sarada Vilas College MYSORE

ಮೊದಲ ಮುದ್ರಣ ೧೯೪೭
ಎರಡನೆಯ ಮುದ್ರಣ ೧೯೬೦





**ಬೆಲೆ :** ಸಾಧಾರಣ ಪ್ರತಿ : ೧–೫೦
ಕ್ಯಾಲಿಕೋ ಪ್ರತಿ : ೩–೦೦

ಮುದ್ರಕರು :

ಶ್ರೀ ಸೀತಾರಾಘವ ಪ್ರೆಸ್
ರಾಮಸ್ವಾಮಿ ಸರ್ಕಲ್ : : ಮೈಸೂರು.

# ವಿಷಯಾನುಕ್ರಮಣಿಕೆ

# ಮುನ್ನುಡಿ

ಈಗ್ಗೆ ಹಲವಾರು ವರುಷಗಳ ಕೆಳಗೆ ಪ್ರಕಟಿತವಾದ 'ಇಂಗ್ಲಿಷ್ ಗೀತಗಳು' ಎಂಬ ಸುಪ್ರಸಿದ್ಧ ಕನ್ನಡ ಗ್ರಂಥದ ಸ್ಫೂರ್ತಿಯಿಂದ ಬರೆದ ಈ ಪುಸ್ತಕಕ್ಕೆ ಮುನ್ನುಡಿಯ ರೂಪದಲ್ಲಿ ನಾಲ್ಕು ಮಾತುಗಳನ್ನು ಬರೆದುಕೊಡುವುದು ನನಗೆ ಬಹಳ ಸಂತೋಷದ ಕೆಲಸ. ಕೀರ್ತಿಶೇಷರಾದ ಮಾನ್ಯ 'ಶ್ರೀ'ಯವರ ಪದ್ಯಗ್ರಂಥವು ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಯಾವ ಹೊಸ ಹುರುಪನ್ನೂ, ತೇಜಸ್ಸನ್ನೂ ಉಂಟುಮಾಡಿತು ಎಂಬುದು ಸರ್ವ ವಿದಿತವಾದುದು. ಆ ಪೂಜ್ಯಗುರುಗಳ ಶಿಷ್ಯಕೋಟಿಯಲ್ಲಿ ಒಬ್ಬ ರಾಗಿ ಹಿರಿಯರಿಂದ ಸ್ಫೂರ್ತಿಯನ್ನು ಪಡೆದು ತಮ್ಮ ಶಕ್ತ್ಯಾನುಸಾರ ಕನ್ನಡ ಸಾಹಿತ್ಯಸೇವೆಯಲ್ಲಿ ಮೊದಲಿನಿಂದಲೂ ನಿರತರಾಗಿರು ವವರು, ಈ ಗ್ರಂಥದ ಲೇಖಕರಾದ ನನ್ನ ಗೌರವಾನ್ವಿತ ಮಿತ್ರರು ಶ್ರೀ. ಪರಮೇಶ್ವರಭಟ್ಟರು. ಇವರು ಆಗಲೇ ಹೆಸರಾದಂಥ ಕವಿ ಗಳು; ಸರಸಿಗಳು, ರಸಿಕರು, ಸದಾ ಹಸನ್ಮುಖಿಗಳು. ಸಾಹಿತ್ಯ ದಲ್ಲಿಯೂ, ತತ್ವಜ್ಞಾನದಲ್ಲಿಯೂ ಸುಶಿಕ್ಷಿತ ಅಭಿರುಚಿಯುಳ್ಳ ಕಲಾವೇತ್ತರು. ಉತ್ತಮವರ್ಗದ ಶಿಷ್ಯಜನಪ್ರಿಯರಾದ ಅಧ್ಯಾಪಕರು. ಇವರ ಈ ಉದ್ಯಮಕ್ಕೆ ಸರ್ವವಿಧವಾದ ಪ್ರೋತ್ಸಾ ಹವನ್ನೂ ಕೊಡುವುದೆಂದರೆ ನನಗೆ ಅತಿ ಮೆಚ್ಚುಗೆಯ ಕೆಲಸ.

ಇಲ್ಲಿ ಸಂಕಲನವಾಗಿರುವ ಪ್ರಬಂಧಗಳೆಲ್ಲಾ ಸುಪ್ರಸಿದ್ಧ ರಾದ ಆಂಗ್ಲ ಸಾಹಿತ್ಯದಲ್ಲಿ ಅಮರಕೀರ್ತಿಯನ್ನು ಗಳಿಸಿದ ಉತ್ತಮ ಲೇಖಕರ ಬರವಣಿಗೆಯ ಅನುವಾದಗಳು. ಆ ಮೂಲ ಲೇಖಕರ ಬರಹದ ವೈಖರಿಯನ್ನೂ, ಅವರವರ ಕಾಲ ದಲ್ಲಿನ ಆಗುಹೋಗುಗಳಿಗೆ ಅವರು ತಮ್ಮ ಬರಹದಲ್ಲಿ ಚಿರ

ಸೌಂದರ್ಯರೂಪವನ್ನು ಕೊಟ್ಟಿರುವ ರೀತಿಯನ್ನೂ ಇಲ್ಲಿ ಸೂಕ್ಷ್ಮವಾಗಿ ಅವಲೋಕಿಸುವುದು ಅನುಚಿತವಿರಲಾರದು. ಉತ್ತಮ ಸಾಹಿತ್ಯವು ತನ್ನ ಎಲ್ಲ ರೂಪಗಳಲ್ಲಿಯೂ, ಎಲ್ಲ ಕಾಲ ಗಳಲ್ಲಿಯೂ ಕವಿಯ ಅಥವಾ ಲೇಖಕನ ವ್ಯಕ್ತಿಪ್ರತಿಪಾದನೆ ಯಲ್ಲದೆ ಆಯಾ ಕಾಲದ ಸಾಮಾಜಿಕ ಚರಿತ್ರೆಯೂ ಆಗಿರುತ್ತದೆ. ಕವಿಯದು ದಿವ್ಯ ದರ್ಶನ. ಪ್ರಕೃತಿಯ ಅನಂತವೂ, ಚಂಚ ಲವೂ ಆದ ಸೌಭಾಗ್ಯ ಸೌಂದರ್ಯಗಳೂ ಮನುಷ್ಯ ಜೀವನದ ನಿತ್ಯಕರ್ಮದಲ್ಲಿರುವ ಧರ್ಮಸೂಕ್ಷ್ಮ ಗೂಢಮರ್ಮಗಳೂ ಕವಿಗೆ ಕರತಲಾಮಲಕವಾಗಿ ಗೋಚರಿಸುತ್ತವೆ. ಆ ಶಾಶ್ವತ ಸತ್ಯ ಸೌಂದರ್ಯ ನಿಧಿಗೆ ಕವಿಯು ತನ್ನ ಪ್ರತಿಭಾ ಬಲದಿಂದ ಶಬ್ದ ರೂಪದಲ್ಲಿ ನಿತ್ಯಜೀವನವನ್ನು ಕೊಟ್ಟು ರಸಿಕರೆಲ್ಲರಿಗೂ ಎಲ್ಲ ಕಾಲದಲ್ಲಿಯೂ ಆಹ್ಲಾದ, ಆನಂದ ಜನಿಸುವಂತೆ ಮಾಡುತ್ತಾನೆ

ಈ ಬಗೆಯ ಸಾಹಿತ್ಯ ರೂಪಗಳಲ್ಲಿ ಗೀತಕವನವೂ, ಲಘು ಪ್ರಬಂಧವೂ ನೇರವಾಗಿ ಪಾಠಕರಿಗೆ ಲೇಖಕನ ಅಂತರಾತ್ಮದ ಸಂಪರ್ಕವನ್ನುಂಟುಮಾಡತಕ್ಕ ರೂಪಗಳು. ಗೀತಸಾಹಿತ್ಯವು ಬಹುಕಾಲದಿಂದಲೂ ಸಾಹಿತ್ಯದಲ್ಲಿ ಮನ್ನಣೆಗೆ ಪಾತ್ರವಾದ ರೂಪ ವಿಶೇಷ. ಮನುಷ್ಯನ ಅಂತರ್ವಾಣಿಯು ಉದ್ರೇಕದಲ್ಲಿ, ಶೋಕದ ಪರಾಕಾಷ್ಠತೆಯಲ್ಲಿ ಆಗ್ರಹದ ಪರಿಮಿತಿಯಲ್ಲಿ, ಪ್ರಣಯದ ಪವಿ ತ್ರತೆಯಲ್ಲಿ ಸಹಜವಾಗಿ ಪದ್ಯರೂಪದ ಶಬ್ದಾನುಸರಣಿಯಾಗು ತ್ತದೆ. ಎಲ್ಲ ದೇಶದ ಸಾಹಿತ್ಯಗಳಲ್ಲಿಯೂ ಗದ್ಯರೂಪಗಳು ಪದ್ಯಸಾಹಿತ್ಯದ ನಾನಾರೂಪಗಳ ಜನನಾಂತರವೇ ದೃಗ್ಗೋಚರ ವಾದುವು. ಅಂತೆಯೇ ಆಂಗ್ಲ ಸಾಹಿತ್ಯದಲ್ಲಿಯೂ ಗದ್ಯರೂಪ ಗ್ರಂಥಗಳು ಹೇರಳವಾಗಿ ಬರಲು ಆರಂಭವಾದುದು ಇತ್ತೀಚೆಗೆ; ಹದಿನೈದನೆಯ ಶತಮಾನದಲ್ಲಿ ಮಾತ್ರ. ಆ ಸಮಯದಲ್ಲಿ ನಿರ್ಮಿ

ತವಾದ 'ಅಚ್ಚುಕೂಟ'ದಿಂದ ಗದ್ಯ ಸಾಹಿತ್ಯವು ವಿಪುಲವಾಗಿ ಬೆಳೆಯಲು ಒಳ್ಳೆಯ ಅವಕಾಶವಾಯಿತು. ಅಲ್ಲಿಂದಾಚೆಗೆ ಗದ್ಯ ಸಾಹಿತ್ಯವು ನಾನಾ ರೂಪದಲ್ಲಿ ನಿರರ್ಗಳವಾಗಿ ಬೆಳೆಯುತ್ತಿದೆ. ಹೀಗೆ ಬೆಳೆದು ಬಂದ ಸಾಹಿತ್ಯರೂಪದಲ್ಲಿ 'ಲಘುಪ್ರಬಂಧ'ವು ಒಂದು ವಿಶೇಷಪ್ರಯೋಗ.

ಮೊದಮೊದಲು ಇದು ಫ್ರಾನ್ಸ್‌ದೇಶದ ಸುಪ್ರಸಿದ್ಧ ಲೇಖಕ ಮಾಂಟೇನ್ (Montaigue) ನಿಂದ ಪೋಷಿಸಲ್ಪಟ್ಟು ಅಲ್ಲಿಂದ ಇತರ ದೇಶಗಳ ಸಾಹಿತ್ಯವನ್ನೂ ಪ್ರವೇಶಿಸಿತು. ಈ ಫ್ರೆಂಚ್ ಲೇಖಕನು ತತ್ವಜ್ಞಾನಕ್ಕೂ, ವಿಜ್ಞಾನಕ್ಕೂ ಹೆಚ್ಚು ಪ್ರಾಮುಖ್ಯತೆಯನ್ನು ಕೊಡದೆ ತನ್ನ ವಿಚಾರವನ್ನೇ ಸರಸವಾಗಿ, ಮಧುರ ಶೈಲಿಯಲ್ಲಿ ಬರೆದು ಓದುಗರಿಗೆ ತನ್ನ ಅಂತರ್ಜೀವನದ ಸರ್ವಸ್ವವನ್ನೂ ತಿಳಿಸಿ ಜನಪ್ರಿಯನಾದನು. ಆತನ ಬರೆವಣಿಗೆಯನ್ನು ಫ್ಲಾರಿಯೋ (Florio) ಎಂಬ ಲೇಖಕನು ಇಂಗ್ಲಿಷ್ ಭಾಷೆಗೆ ಅನುವಾದ ಮಾಡಿ ಆಂಗ್ಲ ಸಾಹಿತ್ಯದಲ್ಲಿ ಅದಕ್ಕೆ ಪೂಜ್ಯತೆಯನ್ನೂ, ಕೀರ್ತಿಯನ್ನೂ ತಂದನು. ತದನಂತರ ಅನೇಕಾನೇಕ ಲೇಖಕರು ಈ ಮಾರ್ಗವನ್ನು ಅನುಸರಿಸಿ ಗದ್ಯಪ್ರಬಂಧಗಳನ್ನು ಬರೆದು ಈ ರೂಪವನ್ನು ಪೋಷಿಸುತ್ತ ಬಂದರು.

ಇದರಲ್ಲಿ ಗಣ್ಯನಾದ ಮೊದಲನೆಯ ಲೇಖಕನೆಂದರೆ ಹದಿನಾರನೆಯ ಶತಮಾನದ ಷೇಕ್ಸ್‌ಪಿಯರ್ ಮಹಾಕವಿಯ ಸಮಕಾಲೀನನಾದ ಫ್ರಾನ್ಸಿಸ್ ಬೇಕನ್ (Francis Bacon). ಈತನು ಮಹಾ ಮೇಧಾವಿ. ವಿಪುಲವಾಗಿ ಜ್ಞಾನಾರ್ಜನೆಯನ್ನು ಮಾಡಿದವನು. ಸ್ವಬುದ್ಧಿಶಕ್ತಿಯಿಂದ ಎಷ್ಟು ದೂರ ಸಮಾಜ ಜೀವನದಲ್ಲಿ ಮುಂದುವರಿಯಬಹುದೋ ಅಷ್ಟೂ ಮುಂದುವರಿದವನು; ರಾಜಕೀಯ ಪಟು; ಅಪ್ರತಿಮನ್ಯಾಯವೇತ್ತ. ಆದರೆ

ಆತ್ಮಪರಿಜ್ಞಾನದಲ್ಲಿಯಾಗಲಿ, ಆತ್ಮನಿಷ್ಠೆ, ಆತ್ಮಪರೀಕ್ಷೆ ಯಲ್ಲಾಗಲಿ ಈತನಿಗೆ ಹೆಚ್ಚು ಆಸಕ್ತಿಯಿಲ್ಲ. ಬಡತನವಿದ್ದರೂ ನೀತಿವಂತರಾಗಿದ್ದರೆ ನಾವು ಮನುಷ್ಯಜೀವದ ಪುರುಷಾರ್ಥವನ್ನು ಸಾಧಿಸಿದಂತೆ ಎಂಬುದು ಈತನ ಮತವಲ್ಲ. ಇಹಪ್ರಪಂಚದಲ್ಲಿ, ಸಮಾಜ ಜೀವನದಲ್ಲಿ ಯಾವ ರೀತಿಯಲ್ಲಿ ಇತರರಿಗಿಂತಲೂ ಮುಂದುವರಿಯಬಹುದು ಎಂಬ ವಿಚಾರವನ್ನು ಕುರಿತೇ ಈತನು ಅನೇಕ ಸಣ್ಣ ಪ್ರಬಂಧಗಳನ್ನು ಬರೆದಿದ್ದಾನೆ. ಹಾಗೂ ಸಮಾಜದ ಮೇಲ್ಮಟ್ಟದ ಶ್ರೀಮಂತ ಜನರ ಬೋಧನೆಗೇ ಈತನ ಬರೆವಣಿಗೆಯೆಲ್ಲಾ. ವಿಜಯಸಾಧನೆಗಾಗಿ ಯಾವ ಮಾರ್ಗವನ್ನಾದರೂ ಅನುಸರಿಸಬಹುದೆಂಬುದೇ ಈತನ ಮತ. ನಿಷ್ಕಳಂಕ ಜೀವನವೇ ಸಾಧಿಸಬೇಕಾದ ವಿಜಯದ ಗುರಿ ಎಂಬುದು ಅಷ್ಟಾಗಿ ಈತನ ಬರವಣಿಗೆಯಲ್ಲಿ ನಿರೂಪಿತವಾಗಿಲ್ಲ. ಬುದ್ಧಿಶಕ್ತಿಯಿಂದ ಬಹು ಎತ್ತರದ ಮಟ್ಟವನ್ನು ಏರಿದ್ದ ಆತನ ಜೀವನ ನೀತಿಬಾಹಿರವಾಗಿದ್ದುದರಿಂದ ಪತನದಲ್ಲಿ ಅಂತ್ಯವಾಯಿತು.

ಈತನ ಪ್ರಬಂಧಗಳಲ್ಲಿ ಭಾಷೆಯು ಬಹುಬಿಗಿ. ಉದಾಹರಣೆಗಳಾಗಲೀ, ಪುನರುಕ್ತಿಯಾಗಲೀ ಇಲ್ಲವೇ ಇಲ್ಲ. ಪ್ರತಿಯೊಂದು ಮಾತೂ ಅರ್ಥಗರ್ಭಿತ. ಶೈಲಿಯಲ್ಲಿ ಬಿಗಿಯುಂಟು. ಸರಳತೆಯಿಲ್ಲ. ಹಾಸ್ಯ, ಶೋಕ, ಕುತೂಹಲ, ಕುಚೋದ್ಯ ಇವು ಯಾವುವೂ ಈ ಬರೆವಣಿಗೆಯಲ್ಲಿಲ್ಲ. ಲೇಖಕನು ತನ್ನನ್ನೇ ತಾನು ಮರೆತು ಆವೇಶಕ್ಕೆ ಎಡೆಗೊಟ್ಟು ಬರೆಯುತ್ತಿದ್ದನೆಂಬುದು ಎಲ್ಲಿಯೂ ಕಾಣದು. ಈ ಪ್ರಬಂಧಗಳಲ್ಲಿ ಕಲೆಗೆ ಅನುಗುಣವಾದ ಪ್ರಸ್ತಾವನೆ ಪರಿಸಮಾಪ್ತಿಗಳಿಲ್ಲ. ವಿಶದವಾಗಿ ಪ್ರಬಂಧವನ್ನು ಬರೆಯುವ ಇತರರು ವಿಷಯದ ವಿಚಾರವಾಗಿ ಗುರುತು ಹಾಕಿಕೊಳ್ಳುವ ಮುಖ್ಯ ಮಾತುಗಳ ವೈಖರಿಯೇ ಇಲ್ಲಿನ ಬರಹದ

ಅನೇಕಾನೇಕ ವಾಕ್ಯಗಳಲ್ಲಿ. ಆದರೂ ಈ ಪ್ರಬಂಧಗಳಲ್ಲೆಲ್ಲ ಒಟ್ಟಿನಲ್ಲಿ ಅನುಭವಪ್ರಪಂಚದ ತಿಳಿವಳಿಕೆಯು ಹೆಚ್ಚಾಗಿ ಕಾಣುತ್ತದೆ. ಈ ಗ್ರಂಥಕರ್ತನ ಸುಪ್ರಸಿದ್ಧವಾದ ಎರಡು ಪ್ರಬಂಧಗಳ ಅನುವಾದವನ್ನು ಈ ಚಿಕ್ಕ ಪುಸ್ತಕದಲ್ಲಿ ಮೊದಲಿನಲ್ಲಿಯೇ ಕಾಣಬಹುದು. ಮೂಲ ಲೇಖನದ ಶೈಲಿಯ ಬಿಗಿಯನ್ನು ಅನುವಾದಕರು ಬಹುಮಟ್ಟಿಗೆ ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಈ ಎರಡು ಪ್ರಬಂಧಗಳಲ್ಲಿಯು ಬೇಕನ್ನನ (Bacon's) ಅನುಭವವೂ, ಪ್ರಪಂಚದ ಪರಿಜ್ಞಾನವೂ, ಮಾನವ ಚಿತ್ತವೃತ್ತಿಯ ಪರಿಚಯುವೂ ಗ್ರಂಥಪರಿಚಯದಿಂದ ಸಂಪಾದಿಸಿದ್ದ ಜ್ಞಾನನಿಧಿಯೂ ಎದ್ದು ಕಾಣುತ್ತವೆ.

ಈ ಕವಿಯ ಬಳಿಕ ಪ್ರಬಂಧರೂಪವನ್ನು ಸಾಹಿತ್ಯದಲ್ಲಿ ವಿಶೇಷವಾಗಿ ಉಪಯೋಗಿಸುವ ಹಲವಾರುಲೇಖಕರಲ್ಲಿ ಅಬ್ರಾಹಂ ಕೌಲೆ (Abraham Cowley) ಮಾತ್ರ ಮುಖ್ಯಸ್ಥನು. ಈತನು ಮಾಂಟೇನ(Montaigue)ನಂತೆ ತನ್ನ ಹೃದಯಾಂತರಾಳದಿಂದಲೆ ಸ್ಫೂರ್ತಿಯನ್ನು ಪಡೆದು ಮುಚ್ಚುಮರೆಯಿಲ್ಲದೆ ಓದುಗರನ್ನು ತನ್ನ ವಿಶ್ವಾಸಕ್ಕೆ ತಂದುಕೊಂಡು ಸರಳವಾಗಿ ತನ್ನ ಅನುಭವವನ್ನೂ, ಭಾವಪ್ರಪಂಚವನ್ನೂ ಭಾಷೆಯಲ್ಲಿ ನಿರೂಪಿಸಿದವನು. ಅನೇಕ ಪ್ರಬಂಧಗಳು ತನ್ನನ್ನೇ ಕುರಿತವು. ಎಲ್ಲ ಬರಹದಲ್ಲಿಯೂ ಎದ್ದು ಕಾಣುವುದು ಕವಿಯ ಬೃಹದ್ರೂಪದ ವ್ಯಕ್ತಿತ್ವವೇ. ಓದುಗನಿಗೆ ಕೂಡಲೇ ಆತ್ಮ ವಿಶ್ವಾಸವು ಹುಟ್ಟಿ ಕವಿಯ ಬರವಣಿಗೆಯಲ್ಲಿ ಆದರವೂ, ಕುತೂಹಲವೂ ಹುಟ್ಟುವುದರಲ್ಲಿ ಆಶ್ಚರ್ಯವೇನು ?

ಹದಿನೇಳನೆಯ ಶತಮಾನದ ಇತರ ಪ್ರಬಂಧಕಾರರು ಈ ರೂಪವನ್ನು ಸಮಾಜದ ವ್ಯಕ್ತಿಗಳನ್ನು ಚಿತ್ರಿಸಲು ಉಪಯೋಗಿ

ಸಿದರು. ಆದರೆ ಆ ಚಿತ್ರಗಳಲ್ಲಿ ಕಾದಂಬರಿ ನಾಟಕಗಳಲ್ಲಿ ಕಾಣಬರುವ ಪಾತ್ರಗಳ ವ್ಯಕ್ತಿತ್ವವಿಲ್ಲ. ಸಮಾಜದಲ್ಲಿರುವ ನಾನಾ ಬಗೆಯ ಉದ್ಯೋಗಾಸಕ್ತರ ಹೊರಗಿನ ಚಹರೆಯೆ ಈ ವರ್ಣನೆ. ವರ್ಣನೆಗಳು ಜೀವಕಳೆಯಿಂದ ತುಂಬಿಲ್ಲ. ಆದುದರಿಂದ ಇಂಥ ವರ್ಣನೆಗಳಿಗೆ ಸಾಹಿತ್ಯದಲ್ಲಿ ಹಿರಿಯ ಸ್ಥಾನ ದೊರಕಿಲ್ಲ. ಎಲ್ಲಿ ಬರವಣಿಗೆಯು ಸಮಾಜ ಜೀವನದ ಅಥವಾ ವ್ಯಕ್ತಿಜೀವನದ ಅಂತರಾತ್ಮವನ್ನು ಹೊರಸೂಸುವುದಿಲ್ಲವೊ ಅಲ್ಲಿ ಸಾಹಿತ್ಯದ ಹಿರಿಯಲಕ್ಷಣವಿಲ್ಲ. ಅಂಥ ಬರವಣಿಗೆಗೆ ಶಾಶ್ವತ ಜೀವವು ದೊರೆಯಲಾರದು. ಹದಿನೇಳನೆಯ ಶತಮಾನದ ಪ್ರಬಂಧಕಾರರನೇಕರ ಬರವಣಿಗೆಯು ಈ ದೋಷದಿಂದ ಕೂಡಿರುವುದು ಸರ್ವವಿದಿತವಾಗಿದೆ.

ಆದರೆ ಅದೇ ಕಾಲದಲ್ಲಿಯೆ ಗದ್ಯರೂಪವನ್ನು ಬೇರೆ ರೀತಿಯಲ್ಲಿ ಉಪಯೋಗಿಸಿದ ಸುಪ್ರಸಿದ್ಧ ಲೇಖಕನೊಬ್ಬನನ್ನು ಈ ಸಂದರ್ಭದಲ್ಲಿ ಮರೆಯುವುದು ಸಾಧ್ಯವಿಲ್ಲ. ಈತನೇ ಡ್ರೈಡೆನ್ (Dryden). ಸ್ವಚ್ಛವಾದ, ತಿಳಿಯಾದ, ಸೊಗಸಾದ ಗದ್ಯಶೈಲಿಯನ್ನು ಈತನು ಸಾಹಿತ್ಯ ವಿಮರ್ಶೆಗೂ, ಸಾಹಿತ್ಯ ದೃಷ್ಟಿಸೂತ್ರ ಪ್ರತಿಪಾದನೆಗೂ ಉಪಯೋಗಿಸಿದನು. ಈತನೇ ಆಧುನಿಕ ಗದ್ಯಶೈಲಿಯ ಜನಕ ಎಂದು ಹೇಳುವ ನುಡಿಯಲ್ಲಿ ಬಹಳ ಮಟ್ಟಿಗೆ ಸತ್ಯವಿದೆ. ಈ ವಿಮರ್ಶಾತ್ಮಕ ಪ್ರಬಂಧಗಳು ದೀರ್ಘವಾದವು. ಅವುಗಳಲ್ಲಿ ವಿಷಯದ ಲಘುತ್ವವಿಲ್ಲ. ಅದರೆ ಬರವಣಿಗೆಯು ವಿಚಾರಭರಿತವಾದುದು. ಅಲ್ಲದೆ ವಿದ್ವಜ್ಜನಾದರಣೆಗೆ ಬರೆಯಲ್ಪಟ್ಟುದು. ಆಸ್ಥಾನದಲ್ಲಿಯ ಜ್ಞಾನಿಗಳ ಮೆಚ್ಚಿಕೆ ಸಂತುಷ್ಟಿಗಳಿಗಾಗಿ ಪ್ರಥಮತಃ ಬರೆಯಲ್ಪಟ್ಟುದು: ಲಘು ಪ್ರಬಂಧಗಳ ಚರಿತ್ರೆಯನ್ನು ನೋಡುವಾಗ ಈ ಉದ್ದಾಮಗದ್ಯ ಲೇಖನಗಳ ಅವಗಾಹನೆಗೆ ಅವಕಾಶವಿಲ್ಲ.

ಹದಿನೆಂಟನೆಯ ಶತಮಾನದ ಆದಿಯಲ್ಲಿ ಬಾಳಿ ಯಶೋವಂತರಾದ ಮೂರು ನಾಲ್ಕು ಲೇಖಕರ ವಿಚಾರವನ್ನು ಇಲ್ಲಿ ಕುರಿತು ಹೇಳುವುದು ಅತ್ಯವಶ್ಯಕ. ಲಘುಪ್ರಬಂಧದ ಬೆಳವಣಿಗೆಗೆ ಇವರು ಬಹುಮಟ್ಟಿಗೆ ಕಾರಣರಾದರು. ಆ ವೇಳೆಗೆ ಇಂಗ್ಲೆಂಡ್ ದೇಶದಲ್ಲಿ ವೃತ್ತಪತ್ರಿಕೆಗಳ ಜನ್ಮವಾಗಿತ್ತು. ಪಾನೀಯ ಮಂದಿರಗಳು (Coffee Clubs) ಲಂಡನ್ ಪಟ್ಟಣದಲ್ಲಿ ಹೇರಳವಾಗಿ ಹುಟ್ಟಿಕೊಂಡಿದ್ದವು. ಈ ಮಂದಿರಗಳು ಕೇವಲ ವಿಶ್ರಾಂತಿಗೃಹಗಳಲ್ಲದೆ ಒಂದೇ ವೃತ್ತಿಯ, ಒಂದೇ ವಯಸ್ಸಿನ ಜನರಕೂಟಕ್ಕೆ ಅನುಕೂಲವಾದ ಸ್ಥಾನಗಳೂ ಆಗಿದ್ದವು. ಈ ಕೂಟಗಳಲ್ಲಿ ಸಮಾಜಜೀವನದ ಹೊಸಹೊಸ ಮಾರ್ಪಾಡುಗಳನ್ನೂ, ರಾಜಧಾನಿಯ ದೊಡ್ಡದೊಡ್ಡ ಸಂಘಟನೆಗಳನ್ನೂ, ಅರಮನೆಯ ವೃತ್ತಾಂತವನ್ನೂ ವಿಪುಲವಾಗಿ ಚರ್ಚಿಸುತ್ತಿದ್ದರು. ಓದುಗರ ಸಂಖ್ಯೆಯು ಆಗತಾನೆ ದೇಶದಲ್ಲಿ ಹೆಚ್ಚಿತ್ತು. ಇಂಥ ಸನ್ನಿವೇಶವನ್ನು ಉಪಯೋಗಿಸಿಕೊಂಡು ಸಮಾಜ ಸುಧಾರಣೆಗಾಗಿ ಆಗಿನ ವೃತ್ತಪತ್ರಿಕಾ ಲೇಖನಗಳನ್ನು ಮಾರ್ಪಡಿಸಿಕೊಂಡು ತಮ್ಮ ವಿದ್ವತ್ಪ್ರಭೆಯಿಂದ ಸಾಹಿತ್ಯಸೃಷ್ಟಿಯನ್ನೂ, ನೀತಿಬೋಧೆಯನ್ನೂ ಮಾಡಿದ ಇಬ್ಬರು ಮಹಾ ವ್ಯಕ್ತಿಗಳೆಂದರೆ ಅಡಿಸನ್ ಮತ್ತು ಸ್ಟೀಲ್ (Addison & Steele). ಇವರಲ್ಲಿ ಸ್ಟೀಲ್ ಮಹನೀಯನು ಜೀವನದ ನಾನಾಬಗೆಯ ಅನುಭವವನ್ನು ಕಂಡವನು. ಹತ್ತಾರು ಬಗೆಯ ವೃತ್ತಿಯಲ್ಲಿದ್ದವನು. ಶಾಸ್ತ್ರೀಯವಾದ ವಿದ್ಯೆಯನ್ನು ಸಾಂಗವಾಗಿ ಅಭ್ಯಸಿಸದೆ ಯೌವನದ ದುರ್ವ್ಯಸನಗಳಿಗೆಲ್ಲಾ ತುತ್ತಾಗಿ ಪ್ರಣಯಾಗ್ನಿಯಲ್ಲಿ ಬಹುಬಾರಿ ಬೆಂದವನು. ಆದರೂ ಸಹೃದಯಿ; ಪ್ರತಿಭಾವಂತ. ಹೊಸಹೊಸ ಯೋಜನೆಗಳನ್ನು ಮಾಡುವುದರಲ್ಲಿ

ನಿಪುಣ. ಆಗಿನ ಸುಪ್ರಸಿದ್ಧ ಪತ್ರಿಕೆಗಳಾದ 'ಟ್ಯಾಟ್ಲರ್' (Tatler) ಮತ್ತು 'ಸ್ಪೆಕ್ಟೇಟರ್' (Spectator) ಇವೆರಡೂ ಈತನ ಪ್ರತಿಭಾಶಕ್ತಿಯಿಂದಲೇ ಕಾರ್ಯರೂಪಕ್ಕೆ ಬಂದವು. ತಾನೆ ತಪ್ಪಿತಸ್ಥನೂ, ಅಕ್ರಮ ಜೀವಿಯೂ ಆದರೂ ಸಮಾಜ ದಲ್ಲಿ ವಿಪರೀತವಾಗಿ ಬೆಳೆದುಹೋಗಿದ್ದ ಅಜ್ಞತೆ, ಅಸಡ್ಡೆ, ಅನೀತಿ, ಅತ್ಯಾಚಾರ, ಶ್ರೀಮಂತರ ಅಹಂಕಾರ, ಜಮೀನ್ದಾರರ ಸೋಮಾರಿತನ, ತರುಣರ ನಿರ್ಲಜ್ಜತೆ, ಕುಲಸ್ತ್ರೀಯರ ಅವಿ ವೇಕನರ್ತನ, ರಾಜ್ಯಾಡಳಿತದಲ್ಲಿ ಕಾಣಬರುತ್ತಿದ್ದ ಅಧರ್ಮ— ಇವುಗಳನ್ನು ನೋಡಿ ದೇಶಕ್ಕಾಗಿ, ಸಮಾಜಕ್ಕಾಗಿ ಮನಮರುಗಿ ಸುಧಾರಣೆಗೆ ಪಣತೊಟ್ಟು ವಿಡಂಬನ ರೀತಿಯಲ್ಲಿ ಲಘುಪ್ರಬಂಧ ದಿಂದ ವೃತ್ತಪತ್ರಿಕೆಯ ಲೇಖನದ ಮುಖಾಂತರ ಸುತ್ತು ಮುತ್ತಲ ಸಮಾಜ ಜೀವನವನ್ನು ತಿದ್ದಿ ಧರ್ಮಕ್ಕೂ, ಸತ್ಯಕ್ಕೂ ಆಸ್ತಿಕತೆಗೂ, ನೈತಿಕಜೀವನಕ್ಕೂ ಪುನಃ ಮರ್ಯಾದೆಯನ್ನು ತಂದ ಮಹಾಪುರುಷ. ಈತನ ಬರವಣಿಗೆಯ ಪ್ರತಿಯೊಂದು ವಾಕ್ಯದಲ್ಲಿಯೂ ಈತನ ಕರುಣಾಪೂರಿತಹೃದಯವೂ, ದೇಶೋ ನ್ನತಿಗೆ ಸರ್ವತ್ಯಾಗವನ್ನೂ ಮಾಡಬೇಕೆಂಬ ಹೆಬ್ಬಯಕೆಯೂ ಕಾಣಬರುತ್ತವೆ. ಇಲ್ಲಿ ಕೊಟ್ಟಿರುವ ಆತನ ಎರಡು ಪ್ರಬಂಧಗಳ ಅನುವಾದದಿಂದ ಆತನ ಮನೋವೃತ್ತಿಯೂ, ಬರಹದ ವೈಖ ರಿಯೂ, ಸುಧಾರಕ ನೀತಿಯೂ ಚೆನ್ನಾಗಿ ಗೋಚರವಾಗುತ್ತವೆ. ಮೊದಲನೆಯ ಪ್ರಬಂಧದಲ್ಲಿ ಬಡತನಕ್ಕೆ ನಾಚುವುದು, ಬಡತ ನಕ್ಕೆ ಹೆದರುವುದು ಎಂಬ ವಿಷಯವನ್ನು ಎತ್ತಿ ಮೊದಲನೆಯದು ಹೇಗೆ ಸ್ವಾಭಿಮಾನದ ಅಲ್ಪ ಶ್ರೀಮಂತರ ಮನೋರೋಗವೆಂಬು ದನ್ನೂ, ಎರಡನೆಯದು ವಿವೇಕಿಗಳಾದ ಉಪಪನ್ನರಲ್ಲಿರುವ ದೊಡ್ಡಗುಣವೆಂಬುದನ್ನೂ ಚೆನ್ನಾಗಿ ತೋರಿಸಿದ್ದಾನೆ. ಕತೆಯ

ರೂಪದಲ್ಲಿ ಕೃತಕನಾಮಧೇಯದಲ್ಲಿ ಆಗಿನ ಸಮಾಜದ ದೋಷ ಗಳನ್ನು ಎತ್ತಿತೋರಿಸಿದ್ದಾನೆ ಎಷ್ಟೋ ಶ್ರೀಮಂತ ಮನೆತನಗಳು ಜಣಪ್ರತಿಷ್ಠೆಯಿಂದ ಈ ರೀತಿಯಲ್ಲಿ ಬಡತನಕ್ಕೆ ನಾಚಿ ಕ್ರಮೇಣ ದಾರಿದ್ರ್ಯಕ್ಕೆ ಬಿದ್ದು ನಾಮಾವಶೇಷವಾದುವು. ಈಗಲೂ ಆಗು ತ್ತಿವೆ. ಮಧ್ಯಮ ವರ್ಗದ ಜನರು ಬಡತನಕ್ಕೆ ಹೆದರಿ ಮಿತವ್ಯಯಿ ಗಳಾಗಿ ಡಂಭಾಚಾರಕ್ಕೆ ಬೀಳದೆ ವಿವೇಕಿಗಳಾಗಿ ಸಿರಿತನವನ್ನು ಹೊಂದಿ ಸುಖಿಗಳಾಗಿ ಬಾಳಿ ಇತರರಿಗೆ ಉಪಕಾರಿಗಳಾಗಿದ್ದಾರೆ ಇದು ಎಲ್ಲ ಕಾಲಕ್ಕೂ ಒಪ್ಪತಕ್ಕ ಮಾತು. ಆಗಿನ ಸಮಾಜಕ್ಕೆ ಈ ವಿವೇಕವಾಣಿಯು ಅತ್ಯವಶ್ಯಕವಾಗಿತ್ತು. ಇದೇ ರೀತಿ ಯಲ್ಲಿಯೇ ಈ ಲೇಖಕನು ಸಮಾಜ ಸುಧಾರಣೆಯಲ್ಲಿ ಉದ್ಯುಕ್ತ ನಾದುದು. ಇಲ್ಲಿನ ಈತನ ಎರಡನೆಯ ಪ್ರಬಂಧದಲ್ಲಿ ತರುಣ ರನ್ನು ಕುರಿತು ಹೇಳಿದ ವಿವೇಕದ ಮಾತಿದೆ. ಸಮಾಜದಲ್ಲಿ ಜನಕೂಟದಲ್ಲಿ ತಮ್ಮ ಮಾತಿನಿಂದ ಎಲ್ಲರನ್ನೂ ಬೆರಗುಮಾಡ ಬೇಕೆಂಬ ಬಯಕೆಯು ಎಲ್ಲರಿಗೂ ಉಂಟಷ್ಟೆ. ಎಂಥ ಸಂಭಾ ಷಣೆಗೆ ಜನಸಮೂಹದಲ್ಲಿ ಆದರ ದೊರಕೀತು, ಸಂಭಾಷಣೆಯ ಉದ್ದೇಶವೇನು, ಕ್ಷುಲ್ಲಕವಾದ ಸ್ವವಿಷಯಗಳಿಂದಲೂ, ಪುರಾಣ ಪ್ರಸಂಗಗಳಿಂದಲೂ ಇತರರ ಮನಸ್ಸಿಗೆ ಆನಂದವನ್ನಾಗಲಿ, ತಿಳಿ ವನ್ನಾಗಲೀ ಉಂಟುಮಾಡುವುದು ಸಾಧ್ಯವೇ, ಇತರರ ಅಮೂಲ್ಯ ವಾದ ಕಾಲವನ್ನು ನಾವು ನಮ್ಮ ಪ್ರತಾಪಗಳನ್ನು ಹೇಳಿಕೊಳ್ಳು ವುದಕ್ಕೆ ಉಪಯೋಗಿಸುವುದು ಯಾವ ರೀತಿಯಲ್ಲಾದರೂ ಕ್ಷಮ್ಯವೆ—ಎಂಬಿವೇ ವಿಚಾರಗಳನ್ನು ಈ ಲೇಖನದಲ್ಲಿ ಕವಿಯು ಪ್ರಸ್ತಾಪಿಸಿದ್ದಾನೆ. ಇಂಥ ಹಿತನುಡಿಯು ಅಂದಿನ ಸಮಾಜ ಸ್ಥಿತಿ ಯಲ್ಲಿ ಎಷ್ಟರಮಟ್ಟಿಗೆ ಬೇಕಾಗಿತ್ತು ಎಂಬುದು ಇದರಲ್ಲಿ ಕಾಣು ತ್ತದೆ. ಸುಧಾರಕನು ಮಾನವ ಪ್ರೇಮಿಯಾಗಿರಬೇಕು; ದೋಷ

ವನ್ನು ದೂರಬೇಕಲ್ಲದೆ, ದೋಷಿಯನ್ನಲ್ಲ; ತಾನು ನಗುವಾಗ ಆ ನಗುವಿನೊಡನೆ ಇತರರ ನೋವು ಸೇರಿರಬಾರದು, ವ್ಯಕ್ತಿ ದ್ವೇಷವು ಸುಧಾರಕನ ರೀತಿಗೆ ಎಂದೂ ಅನುವಾಗದು—ಎಂಬ ಹಿರಿಯ ತತ್ವಗಳಿಗೆ ಸ್ಟೀಲ್ (Steele) ಬರೆದ ಪ್ರಬಂಧಗಳು ಉತ್ತಮ ನಿದರ್ಶನಗಳಾಗಿವೆ.

ಈತನ ಮಿತ್ರನಾದ ಆಡಿಸನ್ನನು (Addison) ಪೂರ್ಣ ಪಾಂಡಿತ್ಯವನ್ನು ಪಡೆದ ವಿದ್ಯಾಸಂಪನ್ನ, ಅದೃಷ್ಟಶಾಲಿ, ಜೀವನ ದಲ್ಲಿ ಹೆಚ್ಚು ಕಷ್ಟ, ಕ್ಲೇಶಗಳನ್ನು ಕಾಣದವನು. ಮೊದಲಿನಿಂದ ಕೊನೆಯವರೆಗೂ ಅನುಕೂಲಸ್ಥಿತಿಯಲ್ಲಿದ್ದವನು. ವಿದ್ಯಾವಿನಯಸಂಪನ್ನನು, ಆದರೆ ವಾಚಳಿಯಲ್ಲ. ಎಂದೂ ದೊಡ್ಡ ಸಭೆಯಲ್ಲಿ ಮಾತನಾಡಿ ಜಯಶೀಲನಾದವನಲ್ಲ. ಆದುದರಿಂದ ತನ್ನ ಬಾಲ್ಯದ ಗೆಳೆಯ ಸ್ಟೀಲ್ (Steele) ಪ್ರಚುರಪಡಿಸಲು ಹೊರಟ ವೃತ್ತಪ್ರತ್ರಿಕೆಗಳಿಗೆ ಮನಸಾ ಸಹಾಯ ಮಾಡಲು ಅನುವಾದನು. ಆ ಪತ್ರಿಕೆಯಲ್ಲಿ ಬರುತ್ತಿದ್ದ ನಿತ್ಯದ ಲಘುಲೇಖನ ಗಳಲ್ಲಿ ಅರ್ಧ ಸಂಖ್ಯೆಗಿಂತ ಹೆಚ್ಚಾದವು ಇವನವೇ. ಸೂಕ್ಷ್ಮದೃಷ್ಟಿ ಯಿಂದ ಸಮಾಜದ ಲೋಪದೋಷಗಳನ್ನು ನೋಡಿ ಅವುಗಳ ತಿದ್ದುಪಡಿಗಾಗಿ ತನ್ನ ಅಪಾರ ಪುಸ್ತಕಜ್ಞಾನವನ್ನೂ, ಮಾನವ ಮನೋವೃತ್ತಿಯ ತಿಳಿವಳಿಕೆಯನ್ನೂ ಉಪಯೋಗಿಸಿದನು. ಈತನ ಶೈಲಿ ಸರಳವಾದರೂ, ಸಂಸ್ಕೃತಿಯಿಂದಲೇ ಬಂದದ್ದು. ಲಘುಹಾಸ್ಯ, ವಿಡಂಬನ, ವ್ಯಂಗ್ಯಚಿತ್ರ, ಅರ್ಥಗರ್ಭಿತನಯೋಕ್ತಿ ಇವುಗಳಿಂದ ತುಂಬಿದುದು. ಮುಖ್ಯವಾಗಿ ಆಗಿನ ಸಮಾಜದ ನಾಸ್ತಿಕತೆ, ಪಕ್ಷಮನೋಭಾವ, ಸೋಮಾರಿತನ, ಧ್ಯೇಯ ದೃಷ್ಟಿಯ ತಿರಸ್ಕಾರ ಇವುಗಳನ್ನು ಈತನು ತನ್ನ ಪ್ರಬಂಧಗಳಲ್ಲಿ ಸೂಕ್ಷ್ಮರೀತಿಯಲ್ಲಿ ವಿಮರ್ಶಿಸಿ ಋಜುಮಾರ್ಗವನ್ನು ತೋರಿಸಿ

ದ್ದಾನೆ. ಇಲ್ಲಿ ಅನುವಾದಿಸಿರುವ ಎರಡು ಪ್ರಬಂಧಗಳಲ್ಲಿ ಮೊದಲ ನೆಯದು (ಎರಡು ಭಾಗಗಳೂ ಸೇರಿ) ಪಕ್ಷೋಮನೋಭಾವದಿಂದ ದೇಶಕ್ಕೆ ಆಗತಕ್ಕ ಅನಾಹುತವನ್ನು ಮನತಟ್ಟುವಂತೆ ಚಿತ್ರಿಸು ತ್ತದೆ. ಈ ಸಾಮಾಜಿಕ ರೋಗವು ಎಲ್ಲಾ ದೇಶಗಳಲ್ಲಿಯೂ ಒಂದಲ್ಲ ಒಂದಸಲ ಕಾಣಿಸಿಕೊಳ್ಳತಕ್ಕದ್ದಾಗಿದೆ. ಹಿಂದಿನ ಪ್ರಖ್ಯಾತಿಪಡೆದ ಇಟಲಿ, ಗ್ರೀಸ್ ದೇಶಗಳಲ್ಲಿ ಈ ದೋಷದಿಂದ ಸಮಾಜ ಜೀವನದಲ್ಲಿಯೂ ರಾಜ್ಯಭಾರಕ್ರಮದಲ್ಲಿಯೂ ಹೇರಳ ವಾದ ಅವಾಂತರವಾಯಿತು. ಇಂಗ್ಲೆಂಡಿನಲ್ಲಿ ಹದಿನೆಂಟನೆಯ ಶತಮಾನದಲ್ಲಿ ರಾಜಕೀಯ ಪಕ್ಷಗಳ ಅವಾಂತರದಿಂದ ನಿತ್ಯಜೀವ ನವೇ ಕಲಕಿಹೋಗಿ ವ್ಯಕ್ತಿ ಮರ್ಯಾದೆಯೇ ತಪ್ಪಿತು ಅದನ್ನೇ ಕುರಿತು ಈ ಲೇಖಕನು ಇಲ್ಲಿ ವಿಚಾರಪೂರಿತವಾಗಿ ಬರೆದಿರುವುದು. ವಿವೇಕಿಯಾದ ದೇಶಭಕ್ತನು ಯಾವ ಪಕ್ಷಕ್ಕೂ ಸೇರಿದವನಲ್ಲ ವೆಂದೂ ಅವನ ಧ್ಯೇಯವೆಲ್ಲಾ ದೇಶಸೇವೆಯೇ ಎಂದೂ ಪಕ್ಷಮ ನೋಭಾವವು ಉಲ್ಬಣಾವಸ್ಥೆಯಲ್ಲಿದ್ದಾಗ ಜನಿಸುವುದೇ ಸದ್ಗೃಹ ಸ್ಥನಿಗೆ ದುರದೃಷ್ಟವಾಗಿ ತೋರಿಬರುವುದೆಂದೂ ಇಲ್ಲಿ ಒತ್ತಿ ಒತ್ತಿ ಹೇಳಿದ್ದಾನೆ. ಈ ಮಾತು ಈಗಿನ ಪ್ರಪಂಚದಲ್ಲಿ ನಮ್ಮ ದೇಶದಲ್ಲಿ ಎಷ್ಟರಮಟ್ಟಿಗೆ ಸತ್ಯವಾಗಿದೆ ಎಂಬುದು ಸುತ್ತಮುತ್ತಲಿನ ಸ್ಥಿತಿ ಯನ್ನು ವಿವೇಕದೃಷ್ಟಿಯಿಂದ ನೋಡುವವರೆಲ್ಲರಿಗೂ ಗೋಚರ ವಾಗದಿರದು. ಬೇರೆ ಬೇರೆ ರಾಷ್ಟ್ರೀಯಪಕ್ಷಕ್ಕೆ ಅಥವಾ ಸಮಾಜದ ಪಕ್ಷಕ್ಕೆ ಸೇರಿದವರೆಂಬ ಒಂದೇ ದೃಷ್ಟಿಯಿಂದ ಪವಿತ್ರಾತ್ಮರೂ, ಪಾಪಭೀರುಗಳೂ, ದೇಶೋನ್ನತಿಗಾಗಿ ಜೀವನವನ್ನೇ ಮುಡುಪಿಟ್ಟ ವರೂ ಹೇಗೆ ಅಲ್ಪವ್ಯಕ್ತಿಗಳಾಗಿ ಪರಿಗಣಿಸಲ್ಪಡುವರೆಂಬುದನ್ನು ನಾವು ನಿತ್ಯವೂ ನೋಡುತ್ತಿಲ್ಲವೆ? ಈ ಲೇಖಕನು ಬರೆದ ಪ್ರಬಂಧ ದಲ್ಲಿ ನಿರೂಪಿತವಾಗಿರುವವಿಷಯವೂ ಇದೇ. ಸಜೀವಸಾಹಿತ್ಯದಲ್ಲಿ

ಎದ್ದು ಕಾಣುವುದು ದೇಶಕಾಲಗಳ ಮಿತಿಯನ್ನು ಮೀರಿದ ಸತ್ಯ ಸ್ವರೂಪ.

ಹಾಗೆಯೇ ಈತನ ಇನ್ನೊಂದು ಪ್ರಬಂಧದಲ್ಲಿ (ಇಲ್ಲಿಯೂ ಎರಡು ಭಾಗಗಳು) ಪ್ರಾಣಿಗಳಲ್ಲಿ ಸಹಜಪ್ರವೃತ್ತಿಯನ್ನು ಕುರಿತು ಬರೆದಿದೆ. ಇಲ್ಲಿ ಈತನ ವಿದ್ಯಾಸಂಪತ್ತಿಯನ್ನೂ ಅಪಾರಪಾಂಡಿತ್ಯವನ್ನೂ, ದೊಡ್ಡ ವಿಚಾರಗಳನ್ನು ಕುರಿತು ಸಮಂಜಸವಾಗಿ ತರ್ಕಮಾಡಲು ಈತನು ಪಡೆದಿದ್ದ ಮೇಧಾ ಶಕ್ತಿಯನ್ನೂ ಕಾಣಬಹುದು. ಮಾತಿಲ್ಲದ ಪ್ರಾಣಿವರ್ಗದ ಸಹಜ ಪ್ರವೃತಿಯನ್ನು ಸೂಕ್ಷ್ಮವಾಗಿ ನೋಡಿ ತಿಳಿದುಕೊಳ್ಳುವುದ ರಿಂದಲೇ ಜಗನ್ನಿಯಾಮಕನೂ ಲೋಕಕ್ಕೆ ಜೀವದಾತನೂ ಆದ ಸರ್ವಶಕ್ತನ ಮಹಿಮೆಯನ್ನೂ ಪ್ರೇಮವನ್ನೂ ಚೆನ್ನಾಗಿ ಕಾಣ ಬಹುದು ಎಂಬ ತತ್ವವನ್ನು ವಿಶದವಾಗಿ ಈ ಪ್ರಬಂಧದಲ್ಲಿ ಅಡಿ ಸನ್ನನು (Addison) ತೋರಿಸಿಕೊಟ್ಟಿದ್ದಾನೆ. ಈತನ ಬರವಣಿಗೆ ಯಲ್ಲೆಲ್ಲಾ ಇಂಥ ಉದ್ದೇಶವು ಎದ್ದು ಕಾಣುತ್ತದೆ. ಲಘು ಪ್ರಬಂಧಕ್ಕೆ ಸಾಹಿತ್ಯರೂಪವನ್ನು ಕೊಟ್ಟು ಅದಕ್ಕೆ ದೇಶದ ಕಲೆ ಯಲ್ಲಿ ಉನ್ನತಸ್ಥಾನವನ್ನು ಕಲ್ಪಿಸಿದ ಸತ್ಕೀರ್ತಿಯು ಈ ಇಬ್ಬರು ಲೇಖಕರಿಗೂ ನಿಸ್ಸಂದೇಹವಾಗಿ ಸೇರತಕ್ಕದ್ದು. ಇವರಿಬ್ಬರಿಂದ ಈ ಸಾಹಿತ್ಯರೂಪದ ಬೆಳೆವಣಿಗೆಗೆ ಆದ ಸಹಾಯವನ್ನು ಎಷ್ಟೆಂದು ಹೇಳಲು ಶಕ್ಯವಿಲ್ಲ.

ಹೆಚ್ಚುಕಡಿಮೆ ಇವರಕಾಲದವರೇ ಆದ ಡಿಫೋ (Defoe) ಸ್ವಿಫ್ಟ್ (Swift) ಇವರುಗಳ ಬರವಣಿಗೆಯಿಂದಲೂ ಗದ್ಯ ಸಾಹಿತ್ಯವೂ ಅದರ ಒಂದು ಭಾಗವಾದ ಲಘುಪ್ರಬಂಧವೂ ಬೆಳೆ ದುವು. ವರ್ಣನೆಯನ್ನು ವಿಶದವಾಗಿ ಮಾಡಿ ಕಲ್ಪನಾವಿಚಾರ ಗಳನ್ನು ಕಣ್ಣಿಗೆ ಕಟ್ಟುವಂತೆ ತೋರಿಸಿಕೊಡುವುದು ಇವರಲ್ಲಿ

ಮೊದಲನೆಯ ಲೇಖಕನ ವಿಶೇಷ ಗುಣ. ಸರಳವಾದ ಆದರೆ ಶಕ್ತಿಯುತವಾದ ಶೈಲಿಯಲ್ಲಿ ಮನುಷ್ಯನ ನಿತ್ಯಜೀವನದ ಅಲ್ಪ ಹವ್ಯಾಸಗಳನ್ನೂ ಕ್ಷುಲ್ಲಕ ಉದ್ಯಮಗಳನ್ನೂ ವ್ಯಂಗ್ಯರೀತಿಯಲ್ಲಿ ವರ್ಣಿಸಿ ನೀತಿಬೋಧೆ ಮಾಡುವುದು ಎರಡನೆಯ ಲೇಖಕನ ಬರವಣಿಗೆಯ ವಿಶೇಷ. ತನ್ನ ಜೀವಮಾನದಲ್ಲಿಯೇ ಉಂಟಾಗಿದ್ದ ನಿರಾಶೆಯಿಂದ, ಅಸ್ವಸ್ಥತೆಯಿಂದ ಸ್ವಿಫ್ಟ್ (Swift) ಲೇಖಕನು ಭಯಂಕರ ನಿರಾಶಾವಾದಿಯಾಗಿದ್ದನು. ಆದರೆ ಈತನ ಬರಹದ ಶೈಲಿಯು ಈ ಪ್ರಬಂಧರಚನೆಯ ಬೆಳವಣಿಗೆಗೆ ಬಹಳ ಮಟ್ಟಿಗೆ ಸಹಾಯಕವಾಗುತ್ತಿತ್ತು.

ಅದೇ ಶತಮಾನದ ಉತ್ತರಾರ್ಧದಲ್ಲಿ ಸುಪ್ರಸಿದ್ಧ ಲೇಖಕರಿಬ್ಬರು ಲಘುಪ್ರಬಂಧದ ಬೆಳವಣಿಗೆಗೆ ಬಹಳ ಉತ್ತೇಜನವನ್ನು ಕೊಟ್ಟರು. ಇವರಲ್ಲಿ ಮೊದಲಿಗನು ಆ ಕಾಲದ ಪಂಡಿತೋತ್ತಮನೂ ಸಾಹಿತ್ಯರಾಜ್ಯದ ಸಾರ್ವಭೌಮನೂ ಅನುಪಮ ಸಂಭಾಷಣಾಕುಶಲನೂ ಆದ ಡಾ. ಜಾನ್ಸನ್ (Dr. Johnson.) ಈತನು ಇಂಗ್ಲಿಷ್ ಭಾಷೆಯಲ್ಲಿನ ಮೊದಲನೆಯ ಶಬ್ದಕೋಶವನ್ನು ಪ್ರಮಾಣಪೂರ್ವಕ ಅರ್ಥವಿವರಣೆಯೊಡನೆ ಬರೆದವನು. ಕೇವಲ ಬಡತನದಲ್ಲಿ ಹುಟ್ಟಿ ಬೆಳೆದು ಬಹುವಿಧದ ತಿರಸ್ಕಾರ ಅನಾದರಣೆಯ ಕಷ್ಟನಿಷ್ಠುರಗಳಿಗೆ ಒಳಗಾಗಿ ಸ್ವಶಕ್ತಿಯಿಂದಲೂ ತಾಳ್ಮೆಯಿಂದಲೂ ಸಾಹಿತ್ಯ ಜಗತ್ತಿನಲ್ಲಿ ಉತ್ತಮ ಪದವನ್ನು ಪಡೆದ ಮೇಧಾವಿ. ತನ್ನ ಜೀವನದ ಅನುಭವದ ದೆಸೆಯಿಂದಲೇ ಈತನ ಬರವಣಿಗೆಯಲ್ಲೆಲ್ಲಾ ಒಂದು ಬಗೆಯ ದುಸ್ಸಹವಾದ ಕ್ಲೇಶ ಸೂಚನೆಯಿದೆ. ನೀತಿಬೋಧೆಯು ಈತನ ಬರವಣಿಗೆಯ ಮೊದಲ ಚಿಹ್ನೆ. ಶೈಲಿಯು ಪಾಂಡಿತ್ಯ ಭೂಯಿಷ್ಠವಾದುದು. ಹಿಂದಿನ ಅಡಿಸನ್, ಸ್ಟೀಲ್‌ರಂತೆ (Addison and Steele)

ಈತನು ತನ್ನ ಕಾಲದಲ್ಲಿ ಸಮಾಜ ಜೀವನದ ಆಗುಹೋಗು ಗಳನ್ನು ಕುರಿತು ಲಘುಪ್ರಬಂಧಗಳನ್ನು ಪತ್ರಿಕಾರೂಪದಲ್ಲಿ ಬರೆದನು. ಆದರೆ ಅವುಗಳಲ್ಲೆಲ್ಲಾ ಎದ್ದು ಕಾಣುವಂತೆ ನೀತಿ ಬೋಧೆಯೇ ಇದ್ದುದರಿಂದಲೂ ಸೂಕ್ಷ್ಮರೀತಿಯಲ್ಲಿಯೂ ಆನಂದ ದಾಯಕವಾಗಿಯೂ ವಿಚಾರ ಜಿಜ್ಞಾಸೆ ಇಲ್ಲದಿದ್ದುದರಿಂದಲೂ ಆಗಾಗಲೀ, ಮುಂದೆಯಾಗಲೀ ಆ ಲೇಖನಗಳಿಗೆ ಹೆಚ್ಚು ಪ್ರಶಸ್ತಿ ದೊರೆಯಲಿಲ್ಲ.

ಈತನ ಸಮಕಾಲೀನನಾದ ಗೋಲ್ಡ್ ಸ್ಮಿತ್ (Goldsmith) ವಿಚಾರ ಹಾಗಲ್ಲ. ಆತನೂ ಅತಿ ಕಷ್ಟದಲ್ಲಿ ಬೆಳೆದವನು. ಆದರೆ ಸಹಜ ಸರಸಿ. ಸೂಕ್ಷ್ಮದೃಷ್ಟಿಯಿಂದ ಬಡತನದ ಜೀವನದ ಹತ್ತಾರು ಬಗೆಯ ಸಮಸ್ಯೆಗಳನ್ನು ಕಣ್ಣಾರ ಕಂಡು, ತನ್ನ ಜೀವನದಲ್ಲಿಯೇ ಅನುಭವಿಸಿ ಕರುಣೆಯಿಂದ ತಿಳಿಹಾಸ್ಯಮಿಶ್ರಿತ ರಮ್ಯಶೈಲಿಯಲ್ಲಿ ತನ್ನ ಲೋಕಾನುಭವವನ್ನು ವರ್ಣಿಸಿದ ಸಾಹಿತ್ಯ ಕಲಾ ಶಿರೋಮಣಿ ಈತನು. ಇವನು ಮುಟ್ಟದಿದ್ದುದಿಲ್ಲ. ಮುಟ್ಟಿದ್ದುದೆಲ್ಲಾ ಚಿನ್ನ. ತಾನೇ ಸಂಕಟದ ಸ್ವರೂಪವನ್ನು ಅನುಭವಿಸಿದ್ದರೂ ನಿರಂತರ ಆಶಾವಾದಿ; ನಿಜವಾದ ಬಡವರ ಬಂಧು; ನಿಷ್ಕಪಟಿ; ಸಂಕಟವನ್ನು ಕಂಡಾಗಲೆಲ್ಲಾ ಎಲ್ಲವನ್ನೂ ತೊರೆದು ತೆರೆದ ಹೃದಯದಿಂದ, ವರದ ಹಸ್ತದಿಂದ ಶಕ್ತಿಮೀರಿ ಸಹಾಯ ಮಾಡಿ, ಮರುಗುವವರಿಗಾಗಿ ಮರುಗಿದ ಪುಣ್ಯಶಾಲಿ. ಸಾಹಿತ್ಯದ ಎಲ್ಲ ರೂಪಗಳನ್ನೂ ಈತನು ಅಭ್ಯಾಸಮಾಡಿದನು. ಎಲ್ಲ ರೂಪ ಗಳಲ್ಲಿಯೂ ಗಣ್ಯಸ್ಥಾನವನ್ನು ಪಡೆದನು. ಲಘು ಪ್ರಬಂಧರಚನೆ ಯಲ್ಲಿಯೂ ಅಂದಿನ ಅಡಿಸನ್, ಸ್ಟೀಲ್ (Addison and Steele) ಇವರುಗಳನ್ನು ಅನುಸರಿಸಿ ಸುತ್ತೆಲ್ಲ ಸಮಾಜದಲ್ಲಿನ ಲೋಪ ದೋಷಗಳನ್ನೂ ತನ್ನ ಜನಾಂಗದ ನ್ಯೂನಾತಿರಿಕ್ತಗಳನ್ನೂ ತಿಳಿ

ಹಾಸ್ಯದಿಂದ ಕೂಡಿದ ಶೈಲಿಯಲ್ಲಿ ಎತ್ತಿ ತೋರಿಸಿದನು. ತಾನೊಬ್ಬ ಚೀಣಾದೇಶದ ತತ್ವಜ್ಞನೆಂದು ಹೇಳಿಕೊಂಡು ಹೆಸರನ್ನು ಮರೆ ಮಾಡಿ ಹೊರಗಿನ ದೇಶದ ವಿದ್ವಾಂಸರು ತನ್ನ ದೇಶದ ಜನರ ಆಚಾರ, ವ್ಯವಹಾರ, ನಡೆನುಡಿ, ಉಡುಪಿನ ವೈಖರಿ—ಇವು ಗಳನ್ನು ನೋಡಿದರೆ ಅವರ ಮನಸ್ಸಿನ ಮೇಲೆ ಆಗಬಹುದಾದ ಪರಿಣಾಮವನ್ನು ಕುರಿತು ಸರಳವಾಗಿ ಬರೆದಿದ್ದಾನೆ. ಎಲ್ಲ ಬರ ವಣಿಗೆಯಲ್ಲಿಯೂ ಈತನ ಸತ್ವಭಾವವೂ, ನಿಷ್ಕಪಟವ್ಯಕ್ತಿತ್ವವೂ, ದಯಾರ್ದ್ರಪೂರಿತಹೃದಯವೂ, ಲಘುಹಾಸ್ಯವೂ ಎದ್ದು ಕಾಣು ತ್ತವೆ. ಈ ಸಂಕಲನದಲ್ಲಿರುವ ಎರಡು ಲೇಖನಗಳಲ್ಲಿಯೂ ಈ ಗುಣಗಳು ಚೆನ್ನಾಗಿ ನಮಗೆ ಗೋಚರವಾಗುತ್ತವೆ.

ಇಲ್ಲಿ ಕೊಟ್ಟಿರುವ "ಊರೂರು ತಿರಗುವ ನಾಟ್ಯವಿಲಾಸಿಯ ಸಾಹಸಗಳು" ಎಂಬ ಪ್ರಬಂಧದಲ್ಲಿ ಕವಿಯ ಲಘುಹಾಸ್ಯವು ಚೆನ್ನಾಗಿ ತಿಳಿಯುತ್ತದೆ. ಈತನು ತನ್ನ ಚಿಕ್ಕ ವಯಸ್ಸಿನಲ್ಲಿ ಕಾಲ್ನಡಗೆಯಿಂದ ದೇಶಪರ್ಯಟನ ಮಾಡುತ್ತಿದ್ದಾಗ ಪಟ್ಟಿರ ಬಹುದಾದ ಕಷ್ಟಗಳನ್ನೂ ತನ್ನಂತೆಯೇ ಬಡತನದಲ್ಲಿ ತೊಳಲು ತ್ತಿದ್ದ ಇತರರ ಕಷ್ಟಗಳನ್ನೂ ಇಲ್ಲಿ ಹಾಸ್ಯ ರೀತಿಯಲ್ಲಿ ವರ್ಣಿಸಿ ದ್ದಾನೆ. 'ಮೂರು ಕಾರಣಗಳಿಂದ, ನನಗೆ ಈ ಊಟ ತುಂಬ ಇಷ್ಟ. ಮೊದಲನೆಯದಾಗಿ (ಇದು) ನನಗೆ ಯಾವಾಗಲೂ ಆಸ್ವಾದ್ಯಮಾನ, ಎರಡನೆಯದಾಗಿ ಈಗ ನನಗೆ ತುಂಬ ಹಸಿವು, ಮೂರನೆಯದಾಗಿ ಮತ್ತು ಕೊನೆಯದಾಗಿ (ಇದನ್ನು) ನಾನು ಉಚಿತವಾಗಿ ಸಂಪಾದಿಸಿದ್ದೇನೆ. ಬೆಲೆ ಕೊಡದಿದ್ದ ಆಹಾರದಷ್ಟು ರುಚಿ ಇನ್ನಾವುದು' ಎಂದು ಹೇಳುವಲ್ಲಿ ಕವಿಯ ಹಾಸ್ಯದ ಸ್ವರೂಪವು ಚೆನ್ನಾಗಿ ತಿಳಿಯುತ್ತದೆ. ಉದರಭರಣಕ್ಕಾಗಿ ನಾನಾ ವೃತ್ತಿಯನ್ನನುಸರಿಸಲುದ್ಯುಕ್ತರಾಗಿ ಹಲವು ಬಗೆಯ ಅಲ್ಪಜನರ

ಸಹವಾಸ ಮಾಡಿ ಎಲ್ಲೆಡೆಯಲ್ಲಿಯೂ ಮನುಷ್ಯಸ್ವಭಾವವನ್ನು ಚೆನ್ನಾಗಿ ತಿಳಿದುಕೊಂಡು ಜ್ಞಾನಾರ್ಜನೆ ಮಾಡಿದ ಕವಿಯ ಸ್ವಾನುಭವವೇ ವ್ಯಂಗ್ಯರೀತಿಯಲ್ಲಿ ಇಲ್ಲಿ ಪ್ರತಿಪಾದಿತವಾಗಿದೆ.

ಈ ಲೇಖನದಲ್ಲಿ ತನ್ನದೇ ಆದ ಲಘುಹಾಸ್ಯವಿದ್ದುದಲ್ಲದೆ ಮನುಷ್ಯಜೀವನದ ದುಸ್ಸಹವಾದ ಸಂಕಟಕ್ಕೆ ಮರುಗಿ ಕಣ್ಣೀರಿಡುವ ಮೃದುಹೃದಯವೂ ಇದೆ. ಜೇನ್ಣಿಯಂಥ ಮನಸ್ಸು. ಆರ್ತರ ರೋದನದ ಧ್ವನಿಯನ್ನು ಕೇಳಿದೊಡನೆಯೆ ಈತನ ಕಣ್ಣಿನಲ್ಲಿ ಅನುತಾಪದ ನೀರು. ಈ ಸರಳ ಸ್ವಭಾವವನ್ನು 'ನಡುರಾತ್ರಿಯಲ್ಲಿ ನಗರ ಸಂಚಾರ' ಎಂಬ ಪ್ರಬಂಧದಲ್ಲಿ ಚೆನ್ನಾಗಿ ಕಾಣಬಹುದು. ಈ ಪ್ರಬಂಧವು ಬಾಹ್ಯರೂಪದಲ್ಲಿ ಗದ್ಯವಾದರೂ ಪದವಿನ್ಯಾಸದಲ್ಲಿಯೂ, ಉದಾತ್ತಭಾವನೆಯಲ್ಲಿಯೂ ಅದರ ಹೃದಯಾಂತರಾಳದಲ್ಲಡಗಿರುವ ಅನುತಾಪದಲ್ಲಿಯೂ ಪದ್ಯಸ್ವರೂಪವೆಂದೇ ಹೇಳಬೇಕು. ಇಲ್ಲಿ ವರ್ಣಿತವಾಗಿರುವುದು ದೊಡ್ಡ ನಗರದ ರಾಜಬೀದಿಗಳಲ್ಲಿ ಕಾಣಬರುವ ಮಧ್ಯರಾತ್ರಿಯ ನೀರವ, ನಿಶ್ಶಬ್ದತೆ. ಆ ಸಮಯದಲ್ಲಿ ಹಗಲಿನ ಉದ್ಯಮಗಳ ಭರಾಟೆಯೆಲ್ಲಾ ಅಡಗಿ ಉಡುಗಿ ಪಟ್ಟಣವೇ ನಿದ್ರಿಸುತ್ತಿರುವಂತೆ ಗೋಚರವಾಗುತ್ತದೆ. ಪರಮ ಪಾತಕಿಗಳು, ಪಾನಪ್ರಿಯರು, ನಗರರಕ್ಷಕರು, ಆತ್ಮಪರೀಕ್ಷಾನಿಷ್ಣಾತರು—ಇವರಲ್ಲದೆ ಆ ಹೊತ್ತಿನಲ್ಲಿ ಇನ್ನಾರೂ ಎಚ್ಚರವಾಗಿರರು. ಗಭೀರವಾದ ಆ ಗಳಿಗೆಯ ನೀರವತೆಯು ಕವಿಯ ಮನಸ್ಸಿಗೆ ಆ ಪಟ್ಟಣದ ಬಹುದೂರದ ಭವಿಷ್ಯವನ್ನು ಭಯಂಕರವಾಗಿ ತರುವುದು. ಹಿಂದೆ ಹೀಗೆಯೇ ಬದುಕಿಬಾಳಿದ ಎಷ್ಟೋ ನಗರಗಳು ನಾಮಾವಶೇಷವಾದುದು ಸ್ಮರಣೆಗೆ ಬರುವುದು. ಆ ದಿವ್ಯ ನಗರಗಳಲ್ಲಿ ತರುಣಿಯರು, ಶಿಶುಗಳು ಕಲಕಲರವದಿಂದ ನಲಿಯುತ್ತಿದ್ದ ಭವ್ಯಭವನಗಳೆಲ್ಲಾ ಈಗ

ಕ್ರಿಮಿಕೀಟಕಗಳೂ, ಕಾಡುಜಂತುಗಳೂ ಸೇರಿಹೋಗಿರುವುದು ಈತನ ಮನಸ್ಸಿಗೆ ಬರುತ್ತದೆ. ಹಾವು-ಹಲ್ಲಿಗಳೂ, ಕ್ಷುದ್ರ ಜೀವಿಗಳೂ ಆ ಪುಣ್ಯಸ್ಥಳಗಳ, ಆ ದೇವಮಂದಿರಗಳ ನೆಲೆಯಲ್ಲಿ ಈಗ ಮನೆ ಮಾಡಿಕೊಂಡಿರುವುದು ಕಣ್ಣಿಗೆ ಕಟ್ಟಿದಂತೆ ಗೋಚರಿಸುತ್ತದೆ. ಇಂಥ ಸಮಯದಲ್ಲಿ ಕವಿಯ ಮನಸ್ಸು ಆ ನಡುರಾತ್ರಿಯಲ್ಲಿ ಮನೆಮಠಗಳಿಲ್ಲದೆ ಆಪ್ತರು ಹಿತವರು ಎಲ್ಲರಿಂದಲೂ ತೊರೆಯಲ್ಪಟ್ಟು ರೂಪಲಾವಣ್ಯವನ್ನೂ, ಯೌವನದ ಸಿರಿಸಂಪತ್ತನ್ನೂ, ಅಮೂಲ್ಯವಾದ ಮಾನನಿಧಿಯನ್ನೂ ಕಳೆದುಕೊಂಡು ಚಳಿಯಲ್ಲಿ ನಡುಗುತ್ತ ಅಶನವಸನಗಳಿಲ್ಲದೆ ತಮ್ಮ ಸರ್ವಸ್ವವನ್ನೂ ಅಪಹರಿಸಿದ ಕಾಮುಕ ಯುವಜನದ ಮನೆಯ ಬಾಗಿಲಲ್ಲಿ ಭೂಮಿಯೇ ಶಯ್ಯೆಯಾಗಿ, ಗಗನವೇ ಹೊದಿಕೆಯಾಗಿ, ಬದುಕಿನಲ್ಲಿಯೇ ಸಾವನ್ನು ಕಂಡ ನಾರೀರತ್ನಗಳ ಹೃದಯಭೇದಕ ಸಂಕಟದಲ್ಲಿ ಲೀನವಾಗುತ್ತದೆ. ಆ ಸಮಯದಲ್ಲಿ ತನ್ನ ನಿಸ್ಸಹಾಯತೆಯನ್ನು ಮನಗಂಡು ಕವಿಯು 'ಅಯ್ಯೋ! ಇಂತಹ ಮಂದಭಾಗ್ಯರ ಸಂಕಟವನ್ನು ನೀಗಲಾರದ ನಾನು ಮನುಷ್ಯನಾಗಿ ಏಕೆ ಹುಟ್ಟಿದೆ?' ಎಂದು ಪರಿತಪಿಸುತ್ತಾನೆ. ಈ ಸನ್ನಿವೇಶ ರೂಪಣೆಯಲ್ಲಿ ಕವಿಯ ವ್ಯಕ್ತಿತ್ವವನ್ನು ನಾವು ಮನಮೆಚ್ಚುವಂತೆ ನೋಡಿ ತಣಿಯಬಹುದು.

ಸಾಹಿತ್ಯದ ಪರಮಸಾರವು ಉದ್ರೇಕದಲ್ಲಿದ್ದ ಪ್ರತಿಭಾಸಂಪನ್ನನಾದ ಕವಿಯ ವ್ಯಕ್ತಿಪರಿಚಯವೇ ಆದುದರಿಂದ ಈ ಬಗೆಯ ಸ್ಫೂರ್ತಿಯುತ ಬರವಣಿಗೆಯಲ್ಲಿ ಕವಿ ಹೃದಯವು ವೇದ್ಯವಾಗುವುದು ನಿರ್ವಿವಾದ ವಿಷಯ. ಇದೇ ಸಾಹಿತ್ಯ ಅಧ್ಯಯನದ ಉತ್ತಮೋತ್ತಮ ಫಲ. ಇಂಥ ಬರವಣಿಗೆಯ ಸೂಕ್ಷ್ಮಪಠನದಿಂದ ಕವಿಯ ಅಂತರಾತ್ಮದ ಚರಿತ್ರೆಯನ್ನೇ ಪುನ

ರ್ರಚಿಸಲು ಸಾಧ್ಯ. ಈ ದೃಷ್ಟಿಯಿಂದ ಈ ಕವಿಯ ಲೇಖನವೆಲ್ಲಾ ಸೂಕ್ಷ್ಮವಾಗಿ ಆತ್ಮಕಥೆಯೇ ಆಗಿದೆ. ಆತನ ಲಘುಪ್ರಬಂಧಗಳನ್ನು ಒಂದು ಕ್ರಮವರಿತು ವ್ಯಾಸಂಗಮಾಡಿದ್ದೇ ಆದರೆ ಕವಿಯ ಜೀವನ ದಲ್ಲಿ ನಡೆದು ಹೋದ ದೊಡ್ಡ ಘಟನೆಗಳ ಪರಿಚಯವುಂಟಾಗು ವುದಲ್ಲದೆ ಆ ಬಾಳಿನ ಮೇಲೆ ಯಶಸ್ವಿಯಾಗಿ ನಡೆದ ಪರಿಣಾಮ ಕಾರಿಯಾದ ಪ್ರಭಾವಗಳೂ (influences) ಅಲ್ಲಿ ದೃಷ್ಟಿಪಥ ದಲ್ಲಿದ್ದ ಧ್ಯೇಯಗಳೂ ಸಂಪೂರ್ಣವಾಗಿ ನಮ್ಮ ಕಣ್ಣಮುಂದೆ ಬರುತ್ತವೆ. ಈ ಕವಿಯ ಬರವಣಿಗೆಯು ಇಷ್ಟು ಬೋಧಕ ವಾಗಿಯೂ ಆನಂದದಾಯಿಯಾಗಿಯೂ ಇರುವುದರಿಂದಲೇ ಈತನು ಸಾಹಿತ್ಯದಲ್ಲಿ ಅಷ್ಟು ಜನಾದರಣೀಯನಾಗಿ ನಿಂತಿರು ವುದು. ಈ ಕವಿಯ ಲಘುಪ್ರಬಂಧಗಳೆಂದರೆ ಈತನ ಮನೋ ರಾಜ್ಯದ ಬೆಳವಣಿಗೆಯ ನಕ್ಷೆಯೆಂದೇ ಹೇಳಬೇಕು. ಕವನವು ಕವಿಯ ವ್ಯಕ್ತಿಪ್ರತಿಪಾದನೆ ಎಂಬುದು ಇಂಥ ಕವಿಗಳ ವಿಷಯ ದಲ್ಲಿ ಅಕ್ಷರಶಃ ಸತ್ಯ.

ಅಲ್ಲಿಂದಾಚೆಗೆ ಈ ಸಾಹಿತ್ಯರೂಪವನ್ನು ತಮ್ಮ ಲೇಖನ ದಲ್ಲಿ ಪ್ರಯೋಗಮಾಡಿದವರಲ್ಲಿ ಹತ್ತೊಂಬತ್ತನೆಯ ಶತಮಾನದ ಆದಿಭಾಗದ ಲೇಖಕರಾದ ಹ್ಯಾಜ್ಲಿಟ್ (Hazlitt), ಡಿಕ್ವಿನ್ಸಿ (De-Quiency), ಲ್ಯಾಂಬ್ (Lamb) ಇವರು ಮುಖ್ಯ. ಇವ ರಲ್ಲಿ ಮೊದಲನೆಯಾತನ ಬರವಣಿಗೆಯ ಶೈಲಿ ಬಹು ಬಿರಸು. ಪ್ರತಿವಾಕ್ಯವೂ ಪ್ರಮಾಣಪೂರ್ವಕವಾಗಿ ಉಲ್ಲೇಖಿಸಲ್ಪಟ್ಟಿದು. ಹೆಚ್ಚು ಭಾಗದ ಬರವಣಿಗೆಯು ಸಾಹಿತ್ಯವಿಮರ್ಶೆಗೆ ಉಪಯೋಗಿ ಸಿದುದು. ಆದರೂ ಇತರ ಗದ್ಯಪ್ರಬಂಧಗಳಲ್ಲಿ ಕವಿಯ ವ್ಯಕ್ತಿ ತ್ವವು ಚೆನ್ನಾಗಿ ನಿರೂಪಿಸಲ್ಪಟ್ಟು ಆತನ ಪಾಂಡಿತ್ಯ ಗಂಭೀರತೆ ಗಳು ಕಾಣಬರುತ್ತವೆ. ಎರಡನೆಯಾತನು ಮಹಾ ಪ್ರತಿಭಾಶಾಲಿ.

ಜೀವನದಲ್ಲಿ ದಿವ್ಯಸ್ವಪ್ನವನ್ನು ಕಂಡವನು. ಈತನ ಶೈಲಿಯು ಪದ್ಯಗ್ರಂಥದ ಶೈಲಿ. ಅದರಲ್ಲಿ ಮಾಧುರ್ಯವೂ, ಗಾಂಭೀರ್ಯವೂ ಇವೆ. ಆದರೆ ಗೋಲ್ಡ್ ಸ್ಮಿತ್ (Goldsmith) ಕವಿಯ ಬರವಣಿಗೆಯಲ್ಲಿರುವ ಲಘುಹಾಸ್ಯ ಸರಳತೆ ಇಲ್ಲ. ಮೂರನೆಯವನಾದ ಚಾರಲ್ಸ್ ಲ್ಯಾಂಬ್ (Charls Lamb) ಎಂಬಾತನು ಗೋಲ್ಡ್ ಸ್ಮಿತ್ (Goldsmith) ನಂತೆಯೇ ಹಾಸ್ಯಪ್ರಿಯ; ಅವನಂತೆಯೇ ಕರುಣಾಳು ಹೃದಯಿ. ಬಡತನದಲ್ಲಿ ಬಾಳಿ ಅದರಲ್ಲಿನ ಸುಖವನ್ನೂ, ಶಾಂತಿಯನ್ನೂ ಮನಗಂಡವನು. ಇಷ್ಟೇ ಅಲ್ಲದೆ ತ್ಯಾಗಿಯಾದ ವೀರನು. ಸಹೋದರಿಯಲ್ಲಿರತಕ್ಕ ಅಪ್ರತಿಮ ನಿರ್ವ್ಯಾಜ ಪ್ರೇಮಕ್ಕಾಗಿ ದಾಂಪತ್ಯ ಜೀವನದಿಂದಲೇ ವಿಮುಖನಾದವನು. ಸಂಕಟವನ್ನು ತೋರ್ಪಡಿಸಯಿಲ್ಲದೇ ಸ್ಥೈರ್ಯದಿಂದ ಸಹಿಸಿದ ಮಹಾಸಾಹಸಿ. ಉದ್ಯೋಗದಲ್ಲಿ ಕೇವಲ ಕಾರ್ಕೂನನು. ಬಡತನದಿಂದ ಶಾಸ್ತ್ರೀಯ ವಿದ್ಯಾಪಾರಂಗತೆಯನ್ನು ಸಾಧಿಸಲಾರದಿದ್ದವನು. ಆದರೆ ಸ್ವಪ್ರಯತ್ನದಿಂದ ವಿದ್ವಜ್ಜರೂ, ಕವಿಶ್ರೇಷ್ಠರೂ ಆದ ಪರಮ ಮಿತ್ರರ ಸತ್ಸಂಗದಿಂದ ಅಖಂಡ ವಿದ್ಯಾಸಂಪತ್ತಿಯನ್ನು ಆರ್ಜಿಸಿ ಹಿರಿಯ ಕವಿಗಳ ವಿಷಯದಲ್ಲಿ ವಿಮರ್ಶಾತ್ಮಕ ಪ್ರಬಂಧಗಳನ್ನು ಬರೆದವನು.

ಈತನ ಬರವಣಿಗೆಯಲ್ಲೆಲ್ಲಾ ಜನಪ್ರಿಯವಾದ ಈತನ ವ್ಯಕ್ತಿತ್ವವೇ ಗೋಚರವಾಗುತ್ತದೆ. ಹಾಸ್ಯ, ದಯೆ ಇವುಗಳ ಸಮ್ಮಿಶ್ರತೆಯು ಶೈಲಿಯಲ್ಲಿ ಎಲ್ಲೆಲ್ಲಿಯೂ ಇದೆ. ಹಿಂದಿನ ಮಾಂಟೇನ (Montaigue) ನಂತೆ ಈತನೂ ಸಹಜ ಸರಳತೆಯಿಂದ ತನ್ನನ್ನೇ ತಾನು ಮರೆತು ತನ್ನ ಅಂತರಂಗದ ಸರ್ವ ವಿಚಾರ ವ್ಯಾಪಾರವನ್ನೂ ಪಾಠಕನಲ್ಲಿ ಹೇಳಿಕೊಂಡು ಆತ್ಮನಿವೇದನ ಮಾಡಿಕೊಳ್ಳುತ್ತಾನೆ. ಇಲ್ಲಿ ಎದ್ದು ಕಾಣುವ ನೈಜವಾದ

ಪ್ರಾಮಾಣಿಕತೆಯೇ ಈ ಲೇಖಕನು ಸಾಹಿತ್ಯ ಪ್ರಪಂಚದಲ್ಲಿ ಗಳಿಸಿರುವ ಪ್ರಶಸ್ತಿಗೆ ಕಾರಣ. ಇಲಿಯಾ (Elia) ಎಂಬ ನಾಮಾಂಕಿತದಿಂದ ಈತನು ಬರೆದ ನೂರಾರು ಲಘುಪ್ರಬಂಧಗಳು ನಿಜವಾಗಿಯೂ ಈ ಬರಹಗಾರನ ಆತ್ಮಕತೆಯಾಗಿ ಪರಿಣಮಿಸಿವೆ. ಈತನ ಕಷ್ಟಸುಖಗಳೂ, ಸ್ನೇಹಬಾಂಧವ್ಯಗಳೂ, ವ್ಯಾಸಂಗ ಪ್ರವೃತ್ತಿಯೂ, ಕಲಾಭಿರುಚಿಯೂ ಈ ಪ್ರಬಂಧಗಳಲ್ಲಿ ಸೊಗಸಾಗಿ ನಿರೂಪಿತವಾಗಿವೆ. ಕವಿಯ ಮೃದುಹೃದಯವೂ, ಕಷ್ಟಸಹಿಷ್ಣುತೆಯೂ, ಹಾಸ್ಯಪ್ರಿಯತೆಯೂ ಎಲ್ಲೆಲ್ಲೂ ಕಾಣುತ್ತವೆ. ಜೀವನದ ಯಾವ ಅನುಭವವನ್ನಾದರೂ ಕುರಿತು ಸ್ವಾರಸ್ಯವಾಗಿ ಬರೆಯಬಲ್ಲ ಮಹಾಶಕ್ತಿ ಈತನಲ್ಲಡಗಿತ್ತು. ಜ್ವರಪೀಡಿತನಾಗಿ ಹಾಸಿಗೆ ಹಿಡಿದು ಮಲಗಿರುವ ರೋಗಿಯ ಸ್ಥಿತಿಯು ಸಾಹಿತ್ಯಕ್ಕೆ ವಸ್ತುವಾಗಬಹುದೆಂಬ ವಿಚಾರವನ್ನು ಈತನು ತೋರಿಸಿಕೊಡುವವರೆಗೂ ಅದು ಯಾರಿಗೂ ಗೋಚರಿಸಿರಲಿಲ್ಲ. ಆ ಸಮಯದಲ್ಲಿ ಮೈಯ ಅಂಗಾಂಗದಲ್ಲಿರುವ ನೋವನ್ನೇ ಕುರಿತು ಪರಿಹಾಸ್ಯದಿಂದ ಬರೆಯಬಲ್ಲ ಶಕ್ತಿಯು ಈತನಲ್ಲಿತ್ತು. ಕವಿದೃಷ್ಟಿಗೆ ಎಲ್ಲದರಲ್ಲೂ ಸತ್ಯಸೌಂದರ್ಯಗಳು ಗೋಚರವಾಗುತ್ತವೆ ಎಂಬುದಕ್ಕೆ ಈತನ 'ಕಾಹಿಲೆಯಿಂದ ಚೇತರಿಸಿಕೊಳ್ಳುತ್ತಿರುವ ರೋಗಿ' ಎಂಬ ಪ್ರಬಂಧವು ಉತ್ತಮ ನಿದರ್ಶನವಾಗಿದೆ. ಕಾಹಿಲೆ ಬಂದೊಡನೆ ಮನುಷ್ಯನಿಗೆ ತನ್ನ ವಿಷಯದಲ್ಲಿಯೇ ಅದ್ಭುತವಾದ ಸ್ವಾರ್ಥವು ಬೆಳೆಯುತ್ತದೆ; ಜಗತ್ತೇ ತನಗಾಗಿ ಇದೆ, ನಡೆಯುತ್ತಿದೆ ಎಂಬ ಭಾಸವುಂಟಾಗುತ್ತದೆ. ಆರೋಗ್ಯಜೀವನದಲ್ಲಿದ್ದ ಹವ್ಯಾಸಗಳೆಲ್ಲವುಗಳಲ್ಲೂ ಈಗ ಮನಸ್ಸೋಡದು. ತನ್ನ ತಲೆಯಲ್ಲಿಯೋ ಹೊಟ್ಟೆಯಲ್ಲಿಯೋ ಇರುವ ದುಸ್ಸಹವಾದ ನೋವನ್ನು ಕಿತ್ತೊಗೆದು ತತ್ಕಾಲಕ್ಕೆ ಶಾಂತಿಸಮಾಧಾನವನ್ನು ಪಡೆಯುವುದೇ

ಅವನ ಸತತ ಚಿಂತೆಯಾಗುತ್ತದೆ. ಜಗತ್ತಿನ ವ್ಯಾಪಾರವೆಲ್ಲ ಆ ಕಾಲದಲ್ಲಿ ನಿಂತುಹೋಗಿರುವುದಾಗಿಯೂ, ಮನೆಯಲ್ಲೂ, ಹೊರಗೂ ಎಲ್ಲರೂ ಮೃದು ಹೆಜ್ಜೆಯಲ್ಲಿ ಓಡಾಡುವುದೂ, ಕಿರು ಧ್ವನಿಯಲ್ಲಿ ಮಾತಾಡುವುದೂ ತನಗಾಗಿಯೇ ಎಂದು ಈತನಿಗೆ ಸಂಪೂರ್ಣವಾಗಿ ಮನವರಿಕೆಯಾಗುತ್ತದೆ. ತಾನೊಬ್ಬನೇ ರೋಗಿ, ವೈದ್ಯನಿಗೆ ಹಗಲೆಲ್ಲಾ ತನ್ನ ಚಿಂತೆಯೆ, ಅವನು ಬರುವುದು ಹೋಗುವುದು ತನಗಾಗಿಯೇ ಎಂಬ ಸ್ವಾರ್ಥವು ಬೃಹದಾಕಾರವನ್ನು ಪಡೆದು ಈ ವ್ಯಕ್ತಿಯನ್ನು ತನ್ನ ಕಣ್ಣಿನಲ್ಲಿಯೇ ಬಹು ದೊಡ್ಡದಾಗಿ ಮಾಡಿಬಿಡುತ್ತದೆ. ಆದರೆ ಕಾಹಿಲೆಯ ಉಲ್ಬಣವು ಇಳಿದು ಆರೋಗ್ಯವು ಮೂಡಲು ಆರಂಭವಾದರೆ ಈ ಹಾಸಿಗೆಯ ಚಕ್ರವರ್ತಿಯು ಸಾಮಾನ್ಯ ಮಾನವ ವ್ಯಕ್ತಿಯಾಗಿ ನಿತ್ಯಗಟ್ಟಲೆಯ ಅಲ್ಪವಾದ ಹವ್ಯಾಸದಲ್ಲಿ ತೊಡಗಿ ತನ್ನ ಮಹತ್ವವನ್ನು ಕಂಡಹಾಗೆಯೇ ಕಳೆದುಕೊಳ್ಳುತ್ತಾನೆ. ಇದೇ ಈ ಪ್ರಬಂಧದಲ್ಲಿರುವ ವಿಚಾರ ಸರಣಿ. ಇಲ್ಲಿನ ಹಾಸ್ಯವನ್ನೂ ಜೀವನದ ಸರ್ವಾನುಭವದಲ್ಲಿಯೂ ಸೊಬಗು—ಸೌಂದರ್ಯಗಳನ್ನು ಕಾಣುವ ಅಭಿರುಚಿಯನ್ನೂ ನಾವು ಚೆನ್ನಾಗಿ ಕಾಣಬಹುದು.

ಹೀಗೆಯೇ ಇನ್ನೊಂದು ಪ್ರಬಂಧದಲ್ಲಿ ಬಡತನದ ಭಾಗ್ಯವನ್ನು ವರ್ಣಿಸಿ ತನ್ನ ಮತ್ತು ತನ್ನ ಸೋದರಿಯ ಜೀವನದಲ್ಲಿಯೇ ಬಡತನದ ಕಾಲದಲ್ಲಿ ಸುಖವಿತ್ತೆಂದೂ, ಅನುಕೂಲತೆಯು ಹೆಚ್ಚಿದಂತೆಲ್ಲಾ ಕಲಾಭಿರುಚಿಯೂ, ಪ್ರವಾಸಚಿಂತೆಯೂ ಮಾಯವಾದುವೆಂದೂ ಆದರೆ ಇದಕ್ಕೆ ಬಡತನವು ಮಾಯವಾದದ್ದು ಕಾರಣವಲ್ಲವೆಂದೂ ಬಡತನದ ಕಾಲದಲ್ಲಿ ಯೌವನ ಉತ್ಸಾಹಗಳು ಮಾಯವಾದದ್ದೇ ನಿಜವಾದ ಕಾರಣವೆಂದೂ ಅತಿ ಸೊಗಸಾಗಿ ಬರೆದಿದ್ದಾನೆ. ಕವಿಯ ವ್ಯಕ್ತಿ ಪ್ರತಿಪಾದನೆಯೇ ಸಾಹಿತ್ಯದ

ಅಂತಿಮಗುರಿ ಎಂಬುದು ಅಲ್ಲಿ ವಿದಿತವಾಗಿದೆ. ಹಾಗೆಯೇ ಈತನ ಲೇಖನಗಳಲ್ಲಿ ಉತ್ತಮವಾದ ಆಂಗ್ಲಗದ್ಯಸಾಹಿತ್ಯದಲ್ಲಿಯೇ ಉತ್ತಮೋತ್ತಮ ಸ್ಥಾನವನ್ನು ನ್ಯಾಯವಾಗಿ ಪಡೆದಿರುವ ಮತ್ತೊಂದು ಲಘುಪ್ರಬಂಧದಲ್ಲಿ ಕವಿಯ ಜೀವನಾನುಭವವೂ, ಅಂತರ್ಗತ ಸಂಕಟವೂ ವಿಶದವಾಗಿ ಗೋಚರವಾಗುತ್ತವೆ. 'ಕನಸಿನ ಮಕ್ಕಳು' ಎಂಬುದೇ ಈ ಪ್ರಬಂಧ. ಇದರ ಶೈಲಿಯು ಪದ್ಯಗ್ರಂಥದ ಶೈಲಿ. ಅನುಭವವು ಕವಿಯ ಹೃದಯದಲ್ಲಿ ಮೂಡಿದುದು. ಒಂದೊಂದು ಮಾತೂ ಅಂತರಂಗದ ವಾಣಿ. ಕವಿಯ ಜೀವನದಲ್ಲಿ ಪ್ರೇಮಕ್ಕೆ ಅವಕಾಶವಿಲ್ಲದೆ ವಿಧಿವಿಲಾಸದಿಂದ ಸುಲಲಿತವಾಗಿ ನಡೆಯಬಹುದಾಗಿದ್ದ ಪ್ರಣಯ ಜೀವನವು ಹೇಗೆ ಅನಿರೀಕ್ಷಿತವಾಗಿ ಕಡಿದುಹೋಯಿತು, ಸಹೋದರಿಯ ಸುಖಕ್ಕಾಗಿ ತಾನು ಹೇಗೆ ಪ್ರಣಯಜೀವನಕ್ಕೆ ವಿಮುಖನಾಗಬೇಕಾಯಿತು, ಆ ತ್ಯಾಗದಲ್ಲಿ ಯಾವ ದೈವಿಕ ಸಂತುಷ್ಟಿಯಿತ್ತು; ಆದರೂ ಹೃದಯಾಂತರಾಳದಲ್ಲಿ ಆ ತಪ್ಪಿಹೋದ ಪ್ರೇಮಜೀವನದ ಸವಿಗನಸು ಹೇಗೆ ಕಾಣುತ್ತಿತ್ತು, ಇದೆಲ್ಲಾ ಈ ಪ್ರಬಂಧದಲ್ಲಿ ಕಾಣಬರುತ್ತದೆ. ತನ್ನ ಸಹೋದರಿಯು ಕ್ಷಣಿಕವಾದ ಬುದ್ಧಿ ಭ್ರಮಣೆಯಿಂದ ತನ್ನ ತಾಯಿಯ ಪ್ರಾಣಹತ್ಯೆಗೆ ಕಾರಣಳಾದುದರಿಂದ ಅವಳ ಮುಂದಿನ ಜೀವನದಲ್ಲಿ ಅವಳಿಗೆ ಶಾಂತಿಸಮಾಧಾನಗಳನ್ನೊದಗಿಸಲು ತಾನು ಹೇಗೆ ಆಗ ಪ್ರೀತಿಸುತ್ತಿದ್ದ ಕೋಮಲಾಂಗಿಯ ಸಹವಾಸದಿಂದ ದೂರವಾಗಬೇಕಾಯಿತು; ಮುಂದೆ ಆ ತರುಣಿಯು ಬೇರೆಕಡೆ ಮದುವೆಯಾದ ಬಳಿಕ ಆಕೆಯಲ್ಲಿ ಜನಿಸಿದ ಮಕ್ಕಳ ಸ್ಮರಣೆಯೇ ಹೇಗೆ ನಿರಾಶೆಯಿಂದ ಕೂಡಿದ ಈ ಬಲವಂತಬ್ರಹ್ಮಚಾರಿಯ ಮನಸ್ಸಿನಲ್ಲಿ ನಿಂತಿತು; ಸಂಸಾರಸುಖದ ಸವಿಯೂ ಹೇಗೆ ತನಗೆ ವಿಧಿಯಿಂದ ತಪ್ಪಿಸಲ್ಪ

ಟ್ಟಿತು—ಎಂಬೆಲ್ಲಾ ಆಂತರಂಗಿಕ ಜೀವನದ ಸಂಕಟದ ಸನ್ನಿವೇಶಗಳನ್ನೂ ಕವಿಯು ಮುಚ್ಚುಮರೆಯಿಲ್ಲದೆ ಇಲ್ಲಿ ನಿರೂಪಿಸಿದ್ದಾನೆ. ಈ ಲಘುಪ್ರಬಂಧಕ್ಕೆ ಕವಿಯ ಆತ್ಮಚರಿತೆಯಲ್ಲಿರುವ ಮಹಾ ಸ್ಥಾನವನ್ನು ಅಭಿರುಚಿಯುಳ್ಳ ಎಲ್ಲಾ ಸಾಹಿತ್ಯ ಪಾಠಕರೂ ಇಲ್ಲಿ ಚೆನ್ನಾಗಿ ನೋಡಬಹುದು.

ಈ ಲೇಖಕನ ಬರವಣಿಗೆಯಲ್ಲಿ ಲಘುಪ್ರಬಂಧದ ಮೂಲ ಚಿಹ್ನೆಗಳೆಲ್ಲಾ ಪುನಃ ಸಂಪೂರ್ಣವಾಗಿ ಬೆಳೆದು ಕಾಣಬಂದುವು. ಈತನ ನಂತರ ಈ ಸಾಹಿತ್ಯರೂಪವನ್ನು ಪ್ರಯೋಗಿಸಿದ ರಾಬರ್ಟ್ ಲೂಯಿಸ್ಟೀವೆನ್‌ಸನ್ (Robert Louis Stevenson) ಮುಂತಾದವರೂ ಇದೇ ರೀತಿಯಲ್ಲಿ ಈ ಸಾಹಿತ್ಯರೂಪವನ್ನು ಆತ್ಮಕಥೆಯ ನಿರೂಪಣೆಗಾಗಿಯೇ ವಿಚಕ್ಷಣೆಯಿಂದ ಉಪಯೋಗಿಸಿದರೆಂದರೆ ತಪ್ಪಾಗಲಾರದು. ಅಲ್ಲಿಂದಾಚೆಗೆ ಇಪ್ಪತ್ತನೆಯ ಶತಮಾನದಲ್ಲಿ ಸುಪ್ರಸಿದ್ಧವಾದ ಮಾಸಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದು ತಮ್ಮ ಅನುಭವವನ್ನು ಪ್ರಚಾರಕ್ಕೆ ತಂದ ಛೆಸ್ಟರ್‌ಟನ್ (Chesterton) ಬೆಲ್ಲಾಕ್ (Bellok) ಲಿಂಡ್ (Lynd) ಗಾರ್ಡಿನರ್ (Gardiner) ಲೂಕಾಸ್ (Lucas)—ಇವರುಗಳ ಬರವಣಿಗೆಯಲ್ಲೆಲ್ಲಾ ಒಂದು ನವೀನತೆ, ತಿಳಿಹಾಸ್ಯ, ವ್ಯಂಗ್ಯಚಿತ್ರ, ಮನುಷ್ಯನ ಅವಿವೇಕದಲ್ಲಿ ಹಾಸ್ಯಪೂರಿತ ಅನುತಾಪ, ಎಲ್ಲದರೊಡನೆ ಕವಿಯ ವ್ಯಕ್ತಿಪ್ರತಿಪಾದನೆ ಇವು ನಿಸ್ಸಂದೇಹವಾಗಿ ಎದ್ದುಕಾಣುತ್ತವೆ. ಹೀಗೆಯೇ ಈಗಲೂ ಮಾಂಟೇನ (Mantaigue) ನಿಂದ ಆರಂಭವಾದ ಈ ಸಾಹಿತ್ಯರೂಪವು ವಿಪುಲವಾಗಿ ಬೆಳೆಯುತ್ತ ಈಗಿನ ಚಟುವಟಿಕೆಯ ಪ್ರಪಂಚದಲ್ಲಿಯೂ ತನ್ನ ಸರಳತೆ ಸೌಂದರ್ಯಗಳಿಂದ ಜನಾದರಣೀಯವಾಗಿದೆ.

ಇಂಥ ಸಾಹಿತ್ಯರೂಪದ ಸಾಧ್ಯಾಸಾಧ್ಯತೆಗಳನ್ನು ಹೊಸ ಕನ್ನಡದ ಸಾಹಿತ್ಯಕ್ಕೂ ಅಳವಡಿಸಿಕೊಂಡು ಮೇಧಾವಿಗಳಾದ ಪಾಶ್ಚಿಮಾತ್ಯಲೇಖಕರ ಕಲಾವೈಖರಿಯನ್ನು ನಮ್ಮ ಸಾಹಿತ್ಯದಲ್ಲಿಯೂ ಕಾಣುವಂತೆ ಮಾಡಿ ನಾಡಿನ ನುಡಿಯ ವಾಙ್ಮಯದ ಬೆಳವಣಿಗೆಗೆ ನಾನಾಬಗೆಯಲ್ಲಿ ದುಡಿಯುತ್ತಿರುವ ಪ್ರಗತಿಪರ ಸಾಹಿತಿಗಳಲ್ಲಿ ನಮ್ಮ ಮಿತ್ರರು ಶ್ರೀ ಪರಮೇಶ್ವರಭಟ್ಟರೂ ಗಣ್ಯರಾದ ಒಬ್ಬ ವ್ಯಕ್ತಿಗಳು. ಇವರ ಉದ್ಯಮವು ಯಶಸ್ವಿಯಾಗಲು ಯಾವ ಸಂದೇಹವೂ ಇಲ್ಲ. ಮೂಲಲೇಖನಗಳ ಜೀವಾಳವನ್ನು ಎಷ್ಟು ಸಾಧ್ಯವೊ ಅಷ್ಟೂ ತಮ್ಮ ಬರವಣಿಗೆಯಲ್ಲಿ ಬರುವಂತೆ ಶ್ರಮವಹಿಸಿ ಅಭಿರುಚಿಯಿಂದ ಅನುವಾದ ಮಾಡಿದ್ದಾರೆ. ಆದರೆ ಮೂಲದ ಹಾಸ್ಯರಸವನ್ನೂ, ಕರುಣರಸವನ್ನೂ ಭಾಷಾಂತರದಲ್ಲಿ ಎತ್ತಿತೋರಿಸುವುದು ಸ್ವಯಂಕವಿಗಳಿಗೂ ಸುಲಭವಲ್ಲ. ಈ ಪ್ರಯತ್ನದಲ್ಲಿಯ ಪ್ರಾಮಾಣಿಕತೆಯನ್ನೂ ಸಾಹಸದ ಸಾಧ್ಯತೆಗಳನ್ನೂ ಪರಿಗಣಿಸಿ ಈ ಚಿಕ್ಕ ಪುಸ್ತಕಕ್ಕೆ ಪ್ರೋತ್ಸಾಹವನ್ನು ಒದಗಿಸುವುದು ಕನ್ನಡನಾಡಿನ ಕಲಾಭಿರುಚಿಯುಳ್ಳವರ ಕರ್ತವ್ಯ.

ಈ ಬಗೆಯ ಪ್ರಬಂಧಕ್ಕೆ 'ಹರಟೆ' ಎಂಬ ಹೆಸರನ್ನು ಕೊಡಬಹುದೆಂದು ಶ್ರೀಮಾನ್ ಗೋಕಾಕ್‌ರವರು 'ಸುಳಿವು-ಹೊಳವು' ಎಂಬ ಲೇಖನ ಸಂಕಲನಕ್ಕೆ ೧೯೩೩ನೆಯ ಇಸವಿಯಲ್ಲಿ ಬರೆದ ಪ್ರಸ್ತಾಪನೆಯಲ್ಲಿ ತಿಳಿಸಿದ್ದಾರೆ. ಸಣ್ಣ ಗದ್ಯ ಪ್ರಬಂಧದಲ್ಲಿ ಲಘುತ್ವವಿದ್ದರೂ, ಗಾಂಭೀರ್ಯವೂ, ಗಹನವಾದ ವಿಚಾರಗಳಲ್ಲಿ ಸೂಕ್ಷ್ಮವಾದ ವಿಮರ್ಶೆಯೂ, ಕವಿತಾಶೈಲಿಯೂ ಕವಿಯ ಅಂತರಂಗದ ಸೂಕ್ಷ್ಮ ಪರಿಚಯವೂ ಇರಬಹುದಾದುದರಿಂದ ಇಂಥ ಬರವಣಿಗೆಗೆ 'ಹರಟೆ' ಎಂಬ ಮಾತು ಅನು

ಚಿತವೆಂದು ತೋರುವುದು. 'ಹರಟೆ' ಯಲ್ಲಿ ಕೊನೆಮೊದಲಿಲ್ಲದ, ಅರ್ಥಗಾಂಭೀರ್ಯವಿಲ್ಲದ ಮಾತಿನ ಮಾಲೆ ಮಾತ್ರ ಕಾಣು ವುದು. ಅಂತಹುದಕ್ಕೆ ಸಾಹಿತ್ಯಪ್ರಪಂಚವನ್ನು ಸೇರುವ ಯಾವ ಹಕ್ಕೂ ಇರಲಾರದು. ಶ್ರೀ. ಶ್ರೀನಿವಾಸರವರ 'ಶಾಂತಿ' ಎಂಬ ಲಘು ಗದ್ಯ ಪ್ರಬಂಧವನ್ನೂ, ಶ್ರೀ. ವಿ, ಸೀ. ಯವರ 'ಕಾಯಿಲೆಗಳು' ಎಂಬ ಪ್ರಬಂಧವನ್ನೂ 'ಹರಟೆ' ಗಳು ಎಂದು ಹೇಳುವುದಾದರೆ ಸಾಹಿತ್ಯಾಭಿರುಚಿಯ ನಿಜವಾದ ಅರ್ಥ ವೇನು ಎಂದು ತಮ್ಮನ್ನೇ ತಾವು ಕೇಳಿಕೊಳ್ಳಬೇಕಾಗುವುದು.

ಈ ರೂಪದ ಪ್ರಬಂಧಗಳಲ್ಲಿ ಸ್ವತಂತ್ರ ಕೃತಿಗಳು ಇತ್ತೀ ಚೆಗೆ ಹೇರಳವಾಗಿ ಬರುತ್ತಿರುವುದು ಸಾಹಿತ್ಯಾಭಿಮಾನಿಗಳಿಗೆಲ್ಲಾ ಶುಭಸೂಚನೆಯೇ. ನಮ್ಮ ದೇಶದ ಸಾಹಿತ್ಯವು ನಾನಾಮುಖ ವಾಗಿ ಬೆಳೆಯಬೇಕಾದರೆ ಅನುವಾದಗಳ ಬೆಳವಣಿಗೆಯೊಡನೆ ಸ್ವತಂತ್ರ ಲೇಖನಗಳೂ ಬೆಳೆಯಬೇಕು. ಶ್ರೀ. ಪರಮೇಶ್ವರ ಭಟ್ಟರ ಈ ಚಿಕ್ಕ ಪುಸ್ತಕವು ಒಂದು ಬಗೆಯಲ್ಲಿ ಮಾರ್ಗದರ್ಶಿ ಯಾದರೆ ಶ್ರೀ. ಎ. ಎನ್. ಮೂರ್ತಿರಾಯರ 'ಹಗಲುಗನಸು ಗಳು' ಇನ್ನೊಂದು ಬಗೆಯಲ್ಲಿ ಮಾರ್ಗದರ್ಶಿ. ಅಲ್ಲಿ ರಸಿಕರಾದ ಲೇಖಕರ ಸ್ವಾನುಭವವು ತಿಳಿಹಾಸ್ಯಮಿಶ್ರಿತವಾದ ಶೈಲಿಯಲ್ಲಿ ಸೊಗಸಾಗಿ ರೂಪಿತವಾಗಿದೆ. ಉಚಿತವರಿತು ಅನುಸರಿಸಿ ನಮ್ಮ ವಿದ್ಯಾಸಂಪತ್ತಿಯನ್ನೂ, ಅನುಭವವನ್ನೂ, ಕಲಾಪ್ರೇಮವನ್ನೂ, ಅಭಿರುಚಿಯನ್ನೂ ಹೆಚ್ಚಿಸಿಕೊಳ್ಳುತ್ತ ನವೀನ ಕೃತಿಯಲ್ಲಿ ತೊಡಗು ವುದೆ ನಾವು ಸರಸ್ವತೀದೇವಿಯ ಆರಾಧನೆಯಲ್ಲಿ ಮಾಡಬಹು ದಾದ ನಿತ್ಯಪೂಜೆಯಲ್ಲವೆ?

ಶಿವಮೊಗ್ಗ

೨೦–೧೧–೧೯೪೭. ಬಿ. ಎನ್. ಶಾಮರಾವ್.

# ಫ್ರಾನ್ಸಿಸ್ ಬೇಕನ್

## ಪ್ರವಾಸ

ಪ್ರವಾಸ, ಚಿಕ್ಕವರಿಗೆ ವಿದ್ಯಾಭ್ಯಾಸದ ಒಂದು ಅಂಗ ವಾದರೆ, ದೊಡ್ಡವರಿಗೆ ಅನುಭವದ ಒಂದು ಅಂಗ. ಭಾಷೆಯಲ್ಲಿ ತಕ್ಕಮಟ್ಟಿಗೆ ಪ್ರವೇಶ ಪಡೆಯುವ ಮೊದಲೆ ಪ್ರವಾಸ ಹೋಗು ವವನು, ಶಾಲೆಗೆ ಹೋಗುವನಲ್ಲದೆ, ಪ್ರವಾಸ ಹೋಗುವುದಿಲ್ಲ. ಪ್ರವಾಸ ಹೋದ, ಭಾಷೆ ಬಲ್ಲ, ಬೋಧಕನ ಇಲ್ಲವೆ ಸೇವಕನ ಜೊತೆಗೆ ಚಿಕ್ಕವರು ಪ್ರವಾಸ ಹೋಗುವುದನ್ನು ನಾನು ಸಂಪೂರ್ಣ ವಾಗಿ ಅನುಮೋದಿಸುತ್ತೇನೆ. ಅಂತಹವರು ಪ್ರವಾಸ ಹೋದಾಗ, ನೋಡಬೇಕಾದ ಸ್ಥಳಗಳು ಯಾವುವು, ಪರಿಚಯಮಾಡಿಕೊಳ್ಳ ಬೇಕಾದ ವ್ಯಕ್ತಿಗಳು ಯಾರು, ಅಲ್ಲಿ ದೊರೆಯುವ ಶಿಕ್ಷಣ ಎಂಥ ಹುದು, ಎನ್ನುವುದನ್ನೆಲ್ಲ ವಿವರಿಸಬಲ್ಲರು. ಇಲ್ಲವಾದರೆ ಚಿಕ್ಕವರು ಮುಖಕ್ಕೆ ಮುಸುಕುಹಾಕಿಕೊಂಡವರಂತೆ, ಹೊರಗಡೆ ನೋಡು ವುದು ಅಲ್ಪಸ್ವಲ್ಪವೇ. ಕಡಲು ಬಾನುಗಳಲ್ಲದೆ ಬೇರೆ ಯಾವುದೂ ಕಾಣಿಸದ ಸಮುದ್ರಯಾನದಲ್ಲಿ, ದಿನಚರಿ ಬರೆಯುವುದು ವಿಚಿತ್ರ. ಆದರೆ ನೋಡಬೇಕಾದದ್ದು ಹೇರಳವಾಗಿರುವ ಭೂಪ್ರಯಾಣ ದಲ್ಲಿ ಅನಿರೀಕ್ಷಿತ ಘಟನೆಗಳೇ ಹೆಚ್ಚು ಉಲ್ಲೇಖಸಾರ್ಹವೆಂಬಂತೆ ಅನೇಕ ಸಂಗತಿಗಳನ್ನು ಕೈಬಿಟ್ಟು ಬಿಡುತ್ತಾರೆ. ಆದ್ದರಿಂದ ದಿನ ಚರಿ ಬರೆಯುವುದನ್ನು ರೂಢಿಸಿಕೊಳ್ಳಲಿ.

ರಾಯಭಾರಿಗಳನ್ನು ಬರಮಾಡಿಕೊಳ್ಳುವ ರಾಜಮಹಾ ರಾಜರ ಆಸ್ಥಾನಗಳು, ವಾದವಿವಾದಗಳನ್ನು ಕೇಳಿ ತೀರ್ಪು ಕೊಡುವ ನ್ಯಾಯಸ್ಥಾನಗಳು, ಮತದ ಮಹಾಸಭೆಗಳು, ಗುಡಿ

ಗೋಪುರಗಳು, ಅವುಗಳಅಳಿದುಳಿದ ಸ್ಮಾರಕಗಳು. ನಗರ ಪಟ್ಟಣಗಳ ಕೋಟಿಕೊತ್ತಲಗಳು, ರೇವು ಬಂದರುಗಳು, ಪುರಾತನ ಅವಶೇಷಗಳು ಮತ್ತು ಪಾಳುಬೀಳುಗಳು, ಪುಸ್ತಕ ಭಂಡಾರಗಳು, ಕಾಲೇಜುಗಳು, ವಿದ್ವತ್‌ಸಭೆಗಳು ಮತ್ತು ಉಪನ್ಯಾಸ ಮಂದಿರಗಳು, ನೌಕಾದಳ ಮತ್ತು ಹಡಗುಗಳು, ದೊಡ್ಡ ದೊಡ್ಡ ನಗರಗಳ ಭವ್ಯ ಮನೋಹರ ಉಪವನಗಳು ಮತ್ತು ಪುರಭವನಗಳು, ಶಸ್ತ್ರಾಗಾರ, ಆಯುಧ ನಿರ್ಮಾಣಾಲಯ, ತೋಪ್‌ಖಾನೆ ಮತ್ತು ಮದ್ದುಗುಂಡುಗಳ ಕೋಠಿಗಳು, ನಾಣ್ಯವಿನಿಮಯ ಮಂದಿರಗಳು, ವ್ಯಾಪಾರದ ಕಟ್ಟೆಗಳು, ದೊಡ್ಡದೊಡ್ಡ ಅಂಗಡಿಗಳು, ಅಶ್ವಶಿಕ್ಷಣ, ಕತ್ತಿವರಸೆ, ಯೋಧಶಿಕ್ಷಣ ಮುಂತಾದವುಗಳು, ಗಣ್ಯ ಸಾಮಾಜಿಕರು ನೋಡುವ ವಿನೋದಾಂತ ನಾಟಕಗಳು, ನಗನಾಣ್ಯಗಳು ಮತ್ತು ಉಡಿಗೆತೊಡಿಗೆಗಳ ನಿಲಯಗಳು, ಚಿತ್ರಶಾಲೆಗಳು, ವಸ್ತುಪ್ರದರ್ಶನಶಾಲೆಗಳು, ಅಪೂರ್ವ ವಸ್ತುಗಳು ಇವೇ ಮುಂತಾದ ಅಲ್ಲಿಯ ಎಲ್ಲ ಸ್ಮರಣೀಯ ವಿಷಯಗಳೇ ಅಲ್ಲದೆ ಸೇವಕರೂ ಬೋಧಕರೂ ಮೊದಲೇ ಆಸಕ್ತಿಯಿಂದ ವಿಚಾರಮಾಡಿ ನಿರ್ಣಯಿಸಿದಂತಹವುಗಳೂ ನೋಡಬೇಕಾದವು, ತಿಳಿಯಬೇಕಾದವು. ವಿಜಯೋತ್ಸವಗಳು, ಮೊಗವಾಡದ ವೇಷಗಳು, ಔತಣಗಳು, ಮದುವೆಗಳು, ಶವಸಂಸ್ಕಾರಗಳು, ರಾಜದ್ರೋಹಿಗಳ ಶಿರಚ್ಛೇದನ ಮುಂತಾದ ಪ್ರದರ್ಶನಗಳು ಇವುಗಳನ್ನೂ ಕಡೆಗಣಿಸಬಾರದೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ.

ಸ್ವಲ್ಪ ಕಾಲಾವಕಾಶದ ದೇಶಸಂಚಾರದಲ್ಲಿಯೇ ಮಹತ್ವದ ಸಂಗತಿಗಳನ್ನು ಸಂಗ್ರಹಿಸುವವರು ಹೀಗೆ ಮಾಡಲಿ. ಮೊದಲು, ಮೇಲೆ ಹೇಳಿದ ಹಾಗೆ, ಪ್ರವಾಸ ಹೊರಡುವ ಮುಂಚೆ ತಕ್ಕ ಮಟ್ಟನ ಭಾಷಾಪರಿಚಯ ಪಡೆಯಲಿ. ಅಲ್ಲದೆ ಹಿಂದೆ ಹೇಳಿ

ದಂತೆ ಪ್ರಾಂತಪರಿಚಯವಿರುವ ಬೋಧಕನೋ ಸೇವಕನೋ ಜೊತೆಗೆ ಇರಲಿ. ತನಗೆ ಒಳ್ಳೆಯ ಮಾರ್ಗದೀಪಿಕೆಯಾಗಬಲ್ಲ ಪುಸ್ತಕವನ್ನೋ ನಕ್ಷಾಸೆಯನ್ನೋ ತೆಗೆದುಕೊಳ್ಳಲಿ. ಜೊತೆಗೆ ಒಂದು ದಿನಚರಿಯನ್ನೂ ಇಟ್ಟುಕೊಳ್ಳಲಿ. ಹೆಚ್ಚು ಕಡಿಮೆ ಯಾವ ಪಟ್ಟಣವಲ್ಲಾಗಲಿ ನಗರದಲ್ಲಾಗಲಿ ಅನವಶ್ಯಕವಾಗಿ ಹೆಚ್ಚು ಕಾಲ ನಿಲ್ಲದಿರಲಿ. ಅಷ್ಟೇ ಅಲ್ಲ, ಅಲ್ಲಿ ನಿಂತಷ್ಟು ಕಾಲ ಕೂಡ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಿ ಬೇರೆ ಬೇರೆ ಭಾಗಗಳಲ್ಲಿ ನೆಲಸಲಿ. ಇಂತಹ ಸ್ಥಳಪಲ್ಲಟ ಪರಿಚಯಕ್ಕೆ ಸೂಜಿಗಲ್ಲಿನಂತೆ. ತನ್ನ ಜನಗಳಿಂದ ದೂರನಾಗಿ, ಆ ಊರಿನ ಒಳ್ಳೆಯ ಜನರ ಸಹವಾಸದಲ್ಲಿ, ಊಟ ಉಪಚಾರಗಳನ್ನು ಮಾಡಲಿ. ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗುವಾಗ ಅಲ್ಲಿಯ ದೊಡ್ಡ ಮನುಷ್ಯರಿಗೆ ಪರಿಚಯ ಪತ್ರಗಳನ್ನು ಕೊಂಡೊಯ್ಯಲಿ. ಆ ಮೂಲಕ ನೋಡಬಯಸುವ ಅಥವಾ ತಿಳಿಯಬಯಸುವ ವಿಷಯಗಳಿಗೆ, ಅವರ ನೆರವು ಪಡೆಯಲಿ. ಇದರಿಂದ ತನ್ನ ಪ್ರವಾಸ ಅತ್ಯಲ್ಪಾವಧಿಯಲ್ಲಿ ಅತ್ಯಂತ ಲಾಭಪ್ರದವಾಗುವುದು.

ಪ್ರವಾಸ ಹೋದಾಗ, ಪರಿಚಯ ಮಾಡಿಕೊಳ್ಳಬೇಕಾದ ವ್ಯಕ್ತಿಗಳಲ್ಲಿ, ತುಂಬ ಪ್ರಯೋಜನಕ್ಕೆ ಬರುವವರು, ರಾಯಭಾರಿಗಳ ಕಾರ್ಯದರ್ಶಿಗಳು, ಮತ್ತು ಅವರ ಪರಿವಾರದವರು. ಇದರಿಂದ, ಒಂದು ಪ್ರಾಂತದಲ್ಲಿ ಪ್ರವಾಸ ಹೋಗುವವನು ಹಲವರ ಅನುಭವಗಳನ್ನು ಹೀರಿಕೊಳ್ಳುತ್ತಾನೆ. ಹೊರಗಡೆ ದೊಡ್ಡ ಹೆಸರು ಗಳಿಸಿರುವ ಎಲ್ಲ ಬಗೆಯ ಮನುಷ್ಯರನ್ನೂ ಕಂಡು ಮಾತನಾಡಲಿ, ಇದರಿಂದ ಅವರ ಕೀರ್ತಿಗೂ ವಾಸ್ತವಸ್ಥಿತಿಗೂ ಇರುವ ಹೊಂದಿಕೆಯನ್ನು ನಿರ್ಣಯಿಸಬಹುದು. ಊರ ವ್ಯಾಜ್ಯಕ್ಕೆ ಹೋಗದಂತೆ ಎಚ್ಚರಿಕೆಯಿಂದಲೂ ವಿವೇಕದಿಂದಲೂ ಹೊರಚ್ಚಾ

ಗಿರಲಿ. ಸಾಮಾನ್ಯವಾಗಿ ಜಗಳವೆಲ್ಲ ಸೂಳೆಗಾಗಿ, ಕುಡಿತಕ್ಕಾಗಿ, ಬೈಗಳಿಗಾಗಿ, ಮೊದಲ ಮರ್ಯಾದೆಗಾಗಿ. ಜಗಳಗಂಟಿಗರೊಡನೆಯೂ ಮುಂಗೋಪಿಗಳೊಡನೆಯೂ ವ್ಯವಹರಿಸದ ಹಾಗೆ ಎಚ್ಚರಿಕೆಯಿಂದಿರಲಿ. ಇಲ್ಲದಿದ್ದರೆ ತಮ್ಮ ಜಗಳಕ್ಕೆ ನಮ್ಮನ್ನೂ ಎಳೆದುಕೊಳ್ಳುತ್ತಾರೆ.

ಪ್ರವಾಸಿಯು ಊರಿಗೆ ಬಂದಮೇಲೆ ತನ್ನ ಹಿಂದೆಯೇ ತನ್ನ ಪ್ರವಾಸದ ಸ್ಥಳಗಳನ್ನು ಮರೆಯದಿರಲಿ. ತಾನು ಪರಿಚಯ ಮಾಡಿಕೊಂಡ ಗಣ್ಯವ್ಯಕ್ತಿಗಳೊಡನೆ ಪತ್ರವ್ಯವಹಾರ ಜೇಸಲಿ. ತನ್ನ ಪ್ರವಾಸದ ಅನುಭವ, ಉಡಿಗೆ ತೊಡಿಗೆಗಳಲ್ಲಿ, ಅಂಗಚೇಷ್ಟೆಗಳಲ್ಲಿ, ಕಾಣಿಸಿಕೊಳ್ಳುವುದರ ಬದಲು, ಮಾತು ಕಥೆಗಳಲ್ಲಿ ತೋರಿಬರಲಿ. ಮಾತುಕಥೆಗಳಲ್ಲಿ ಕೂಡ ತಲೆಹರಟೆಗಿಂತ ತೂಕದ ಮಾತುಗಳನ್ನು ಆಡಲಿ. ತನ್ನ ದೇಶದ ಆಚಾರವಿಚಾರಗಳನ್ನು ಬಿಟ್ಟು ಪರದೇಶದ ಆಚಾರ ವಿಚಾರಗಳನ್ನು ಅನುಸರಿಸದಿರಲಿ. ಆದರೆ ತನ್ನ ಪ್ರವಾಸಾನುಭವಮಂಜರಿಯ ಒಂದೊ ಎರಡೊ ಹೂವುಗಳನ್ನು ತನ್ನ ದೇಶಪದ್ಧತಿಗೆ ಅಲಂಕಾರವಾಗುವಂತೆ ಸೇರಿಸಿಕೊಳ್ಳಲಿ.

## ಅಧ್ಯಯನ

ಅಧ್ಯಯನದಿಂದ ಆನಂದ, ಅಲಂಕಾರ, ಅರ್ಹತೆ, ಸಿದ್ಧಿಸುತ್ತದೆ. ಅದು ವಿರಾಮ ವಿವಿಕ್ತತೆಗಳಲ್ಲಿ ಆನಂದದಾಯಿ; ವಾದವಿವಾದಗಳಲ್ಲಿ ಭೂಷಣಪ್ರದ; ವ್ಯವಹಾರ ನಿರ್ಣಯಗಳಲ್ಲಿ ಶಕ್ತಿಸಾಧಕ. ಪ್ರವೀಣರು ಒಂದೊಂದು ನಿರ್ದಿಷ್ಟ ವಿಷಯಗಳನ್ನೂ ನಿರ್ವಹಿಸಬಲ್ಲರು, ನಿರ್ಣಯಿಸಬಲ್ಲರು. ಆದರೆ ಸಾರ್ವತ್ರಿಕವಾದ ಸಲಹೆ ಸಹಕಾರಗಳಾಗಲಿ, ಕಾರ್ಯಯೋಜನೆ

ನಿರ್ವಹಣೆಗಳಾಗಲಿ, ಅಧ್ಯಯನ ಪಟುಗಳಿಗೆ ಮಾತ್ರ ಸಾಧ್ಯ. ಅಧ್ಯಯನದಲ್ಲಿ ಹೆಚ್ಚು ಹೊತ್ತು ಕಳೆಯುವುದು ಪಾಲುಮಾರಿಕೆ; ಅದೊಂದು ಭೂಷಣವೆಂದು ಅತಿಯಾಗಿ ಬಳಸುವುದು ವಿದ್ವತ್ತಿನ ಸೋಗು; ಅದರ ನಿಯಮಗಳಿಂದಲೇ ನಿರ್ಣಯಗೊಡುವುದು, ಪಂಡಿತರ ಮನೋಧರ್ಮ. ಹುಟ್ಟುಗುಣ, ಅಧ್ಯಯನದಿಂದ ಹಸನಾಗುವಂತೆ, ಅಧ್ಯಯನ ಅನುಭವದಿಂದ ನಿರ್ದುಷ್ಟವಾಗುತ್ತದೆ. ಹುಟ್ಟುಗುಣ, ಸಹಜವಾಗಿ ಬೆಳೆದ ಗಿಡದ ಹಾಗೆ; ಅದು ಅಧ್ಯಯನದಿಂದ ಪರಿಷ್ಕೃತವಾಗಬೇಕು. ಅಧ್ಯಯನವನ್ನು ವ್ಯವಹಾರಜ್ಞರು ಅವಜ್ಞೆಗೈಯುತ್ತಾರೆ; ಮುಗ್ಧರು ಕೀರ್ತಿಸುತ್ತಾರೆ; ವಿದಗ್ಧರು ಉಪಯೋಗಿಸಿಕೊಳ್ಳುತ್ತಾರೆ; ಕಾರಣ, ವಿದ್ಯೆ ಕಲಿತಮಾತ್ರಕ್ಕೇ ಕರಗತವಾಗದೆ ಲೋಕಾನುಭವ ಲೋಕವೀಕ್ಷಣಗಳಿಂದ ಉರ್ಜಿತವಾಗತಕ್ಕದ್ದು. ಪ್ರತಿಷೇಧಕ್ಕಾಗಿ, ಖಂಡನೆಗಾಗಿ, ಓದಬೇಡ. ಅಂಧಶ್ರದ್ಧೆ ಗ್ರಂಥದಾಕ್ಷಿಣ್ಯಗಳಿಗಾಗಿಯೂ ಓದಬೇಡ, ಚರ್ಚೆಗಾಗಿ, ವಾದಕ್ಕಾಗಿ, ಕೂಡಾ ಓದಬೇಡ. ಆದರೆ ವಿಮರ್ಶಾತ್ಮಕ ವಿಚಾರಮಥನಕ್ಕಾಗಿ ಮಾತ್ರ ಓದು. ಕೆಲವು ಪುಸ್ತಕಗಳು ರುಚಿನೋಡಬೇಕಾದವು; ಕೆಲವು, ಕಬಳಿಸಬೇಕಾದವು; ಕೆಲವು ಮಾತ್ರ; ಅಗಿದು ಅರಗಿಸಿಕೊಳ್ಳಬೇಕಾದವು. ಎಂದರೆ ಕೆಲವು ಪುಸ್ತಕಗಳು ಭಾಗಶಃ ಓದಬೇಕಾದುವು; ಕೆಲವು ಪೂರ್ಣವಾಗಿ ಓದಬೇಕಾದುವು, ಆದರೆ ಹೆಚ್ಚಿನ ಆಸೆಯಿಂದಲ್ಲ; ಕೆಲವು ಮಾತ್ರ ಶ್ರದ್ಧೆ ಅವಧಾನಗಳಿಂದ ಕೂಲಂಕಷವಾಗಿ ಓದಬೇಕಾದವು. ಕೆಲವು ಪುಸ್ತಕಗಳನ್ನು ಬೇರೆಯವರಿಂದ ಓದಿಸಿ ಟಿಪ್ಪಣಿ ಮಾಡಿಸಬಹುದು; ಆದರೆ ಸಾರತೆಗೆದ ಪುಸ್ತಕಗಳು ಸಾರತೆಗೆದ ಸಾರಾಯಿಯಂತೆ ಸಪ್ಪೆಯಾಗಿರುತ್ತವೆಯಾಗಿ ಅಷ್ಟು ಮುಖ್ಯವಲ್ಲದ ಕೆಳಮಟ್ಟದ ಪುಸ್ತಕಗಳಿಗೆ ಮಾತ್ರ, ಇದು ಅನ್ವಯಿಸುವುದು.

ಮಾನವನು ಅಧ್ಯಯನದಿಂದ ಪರಿಪೂರ್ಣನಾಗುತ್ತಾನೆ; ಜಿಜ್ಞಾಸೆಯಿಂದ ಪ್ರತ್ಯುತ್ಪನ್ನಮತಿಯಾಗುತ್ತಾನೆ; ಬರವಣಿಗೆಯಿಂದ ನಿಷ್ಕೃಷ್ಟನಾಗುತ್ತಾನೆ. ಆದ್ದರಿಂದ ಬರೆಯುವುದು ಕಡಿಮೆಯಾದವನು ಜ್ಞಾಪಕಶಕ್ತಿಯನ್ನು ಹೆಚ್ಚಿಸಿಕೊಳ್ಳುವುದು ಆವಶ್ಯ. ಅಲ್ಪ ಜಿಜ್ಞಾಸವು ದ್ರುತಮತಿಯಾಗಿರುವುದು ಅಗತ್ಯ. ಓದು ಕಡಿಮೆಯಾದವನು ಗೊತ್ತಿಲ್ಲದಿದ್ದರೂ ಗೊತ್ತಿರುವವನಂತೆ ಗತ್ತುಗಾರನಾಗಿರುವುದು ಅತ್ಯಗತ್ಯ. ಜನರಿಗೆ ಇತಿಹಾಸದಿಂದ ಪ್ರಾಜ್ಞತೆ, ಸಾಹಿತ್ಯದಿಂದ ಪ್ರತಿಭೆ, ಗಣಿತದಿಂದ ವಿಚಕ್ಷಣತೆ. ಪ್ರಕೃತಿ ವಿಜ್ಞಾನದಿಂದ ಧ್ಯಾನಬುದ್ಧಿ. ನೀತಿ ವಿಜ್ಞಾನದಿಂದ ಗಭೀರತೆ, ತರ್ಕವಾಗ್ಮಿಕಲೆಗಳಿಂದ ವಾದಪಟುತ್ವ ಸಿದ್ಧಿಸುತ್ತವೆ.

‘ವಿದ್ಯಾ ದದಾತಿ ವಿನಯಂ.’ ಅಷ್ಟೇ ಅಲ್ಲ; ದೈಹಿಕ ರೋಗಗಳಿಗೆ ತಕ್ಕ ಚಿಕಿತ್ಸೆಗಳಿರುವಂತೆ ಬೌದ್ಧಿಕ ರೋಗಗಳಿಗೂ ತಕ್ಕ ಪರಿಹಾರಗಳಿವೆ. ಅಶ್ಮರಿ ರೋಗಕ್ಕೆ ಚೆಂಡಾಟ, ಎದೆ ಶ್ವಾಸಕೋಶಗಳಿಗೆ ಶಿಕಾರಿ, ಹೊಟ್ಟೆಗೆ ಮೆಲ್ಲನೆಯ ನಡಿಗೆ, ತಲೆಗೆ ಸವಾರಿ, ಒಳ್ಳೆಯದೆಂಬಂತೆ; ಪ್ರಯೋಗಗಳಲ್ಲಿ ವಿಫಲನಾದರೆ ಮತ್ತೆ ಮತ್ತೆ ಪ್ರಯತ್ನಪಡುವ ದೃಢಬುದ್ಧಿ ಬೇಕಾಗಿ; ಬುದ್ಧಿ ಚಾಂಚಲ್ಯಕ್ಕೆ ಗಣಿತ, ತಾರತಮ್ಯ ಜ್ಞಾನಾಭಾವಕ್ಕೆ ಕೂದಲು ಸೀಳುವಂತಹ ವಿಪರೀತ ಸೂಕ್ಷ್ಮಬುದ್ಧಿ ಬೇಕಾಗಿ; ತಾರ್ಕಿಕರ ಶುಷ್ಕವಾದ; ಪರಾಮರ್ಶನ ಶಕ್ತಿಸಾಮರ್ಥ್ಯಕ್ಕೆ ವಕೀಲಿವಿದ್ಯೆ. ಒಳ್ಳೆಯದಾಗಬಹುದು. ಹೀಗೆ ಒಂದೊಂದು ವಿದ್ಯೆ. ಒಂದೊಂದು ಮನೋರೋಗಕ್ಕೆ ತಕ್ಕ ಮದ್ದಾಗಬಹುದು.

---

# ರಿಚರ್ಡ್ ಸ್ಟೀಲ್

## ದುಂದುಗಾರಿಕೆ-ಮಿತವ್ಯಯ

ಕುಲೀನ ಶಿಕ್ಷಣದಿಂದ ನಮ್ಮ ನಡವಳಿಕೆಯ ಮೇಲೆ ಆಗುವ ಪರಿಣಾಮವೂ ಮಿತವ್ಯಯದಿಂದ ನಮ್ಮ ಅದೃಷ್ಟದ ಮೇಲೆ ಆಗುವ ಪರಿಣಾಮವೂ ಒಟ್ಟಿನಲ್ಲಿ ಒಂದೇ. ಈ ಎರಡ ರಲ್ಲಿಯೂ ಆಡಂಬರದ ಡಬಡ್ಡಾಳಿಕೆಗೆ ಅವಕಾಶವಿರುತ್ತದೆ. ಇದ ರಿಂದ ಪುರಸ್ಕಾರಕ್ಕೆ ಪಾತ್ರರಾಗಬೇಕಾದವರು; ತಿರಸ್ಕಾರಕ್ಕೂ ದುರವಸ್ಥೆಗೂ ಪಾತ್ರರಾಗಬೇಕಾಗುತ್ತದೆ. ನಿನ್ನೆ ನಮ್ಮ ರೋಜರ್ ಮಹಾಶಯನ ಔತಣ ಸಮಾರಂಭಕ್ಕೆ ಹಳ್ಳಿಯಿಂದ ಅನೇಕ ಜನ ಗಣ್ಯರು ಬಂದಿದ್ದರು. ಊಟವಾದ ಮೇಲೆ ಕುಡಿತದಲ್ಲಿ ಅಭಿರುಚಿ ಇದ್ದವರು ಸ್ವಲ್ಪ ಹೆಚ್ಚಾಗಿಯೇ ಕುಡಿದರು. ಅವರಲ್ಲೆಲ್ಲ ತಕ್ಕ ಮಟ್ಟಿಗೆ ಲಕ್ಷಣವಾಗಿದ್ದವನೊಬ್ಬನು ನನ್ನ ಕಣ್ಣಿಗೆ ಬಿದ್ದನು. ಕುಡಿಯುವುದರಲ್ಲಿ ಆತನಿಗೆ ಉಳಿದವರಿಗಿಂತ ಹೆಚ್ಚಿನ ಆಸೆ ಇದ್ದಿ ತಾದರೂ ಅದರಿಂದ ಆತ ಸುಖಪಟ್ಟಂತೆ ನನಗೆ ತೋರಲಿಲ್ಲ. ಅಮಲು ತಲೆಗೇರಿದಂತೆಲ್ಲ ನಮ್ಮ ಒಂದೊಂದು ಮಾತೂ ಅವನಿಗೆ ವ್ಯಂಗ್ಯವಾಗಿ ತೋರಿತು. ಪ್ರಜ್ಞೆ ತಪ್ಪಿದಂತೆಲ್ಲ ಬುದ್ಧಿಯೂ ಕೆಟ್ಟು ಹೋಯಿತು. ಈ ಬಗೆಯ ಕಹಿ ವರ್ತನೆಗೆ ನಮ್ಮ ವಿಷಯದಲ್ಲಿ ಅವನಿಗೆ ಇದ್ದ ಅಸಹನೆಗಿಂತ ತನ್ನ ವಿಷಯದಲ್ಲಿ ಅವನಿಗಿದ್ದ ಅತೃಪ್ತಿಯೇ ಕಾರಣವೆನ್ನುವುದೂ ಈ ವೇಳೆಗೆ ವ್ಯಕ್ತವಾಯಿತು. ಹೆಸರು ಕೇಳಿದ ಮೇಲೆ ಆತ ತಕ್ಕಮಟ್ಟಿಗೆ ಬಲಾಢ್ಯನಾದರೂ ಸಾಲದಲ್ಲಿ ಮುಳುಗಿ ಹೋದ ನಮ್ಮ ಊರಿನ ಸಾಹುಕಾರನೆಂದೂ ಮೈಯೆಲ್ಲ ಸಾಲವಾಗಿ ಚಕ್ರಬಡ್ಡಿಗೆ ಆಸ್ತಿಯೆಲ್ಲ ಕರಗಿ ಹೋಗು

ತ್ತಿರುವುದೇ ಅವನ ಉರಿಮೋರೆಗೆ ಕಾರಣವೆಂದೂ ಗೊತ್ತಾಯಿತು. ಸಾಲ ತೀರ್ಮಾನಕ್ಕಾಗಿ ಆಸ್ತಿಯ ಕೊಂಚ ಭಾಗವನ್ನು ಮಾರೋಣವೆಂದರೆ ಮನಸ್ಸಿಲ್ಲ. ಅಷ್ಟೇ ಅಲ್ಲ; ಸಾಹುಕಾರಿಕೆಯ ಒಣಜಂಭಕ್ಕೆ ಒಳಗಾಗಿ, ರಾತ್ರಿಯೆಲ್ಲ ನಿದ್ದೆಗೆಡುವುದು, ಹಗಲೆಲ್ಲ ಚಿಂತೆ ಮಾಡುವುದು, ಊರೆಲ್ಲ ಕೆಟ್ಟ ಮಾತು ಕೇಳುವುದು, ಇವೇ ಮೊದಲಾದ ಇನ್ನೂ ಸಾವಿರ ಹೆಸರಿಲ್ಲದ ನೋವು ಸಹಿಸಿಯಾದರೂ ಚಕ್ರಬಡ್ಡಿಯ ಗೆದ್ದಲಿಗೆ ಆಸರೆ ಕೊಟ್ಟಾನಲ್ಲದೆ 'ಸಾಲದ ವಿಲೇವಾರಿಗಾಗಿ ಆಸ್ತಿಯಲ್ಲಿ ಸ್ವಲ್ಪ ಮಾರಿಕೊಂಡು ವರಮಾನ ಕಡಿಮೆಯಾದ ಸಾಹುಕಾರ' ಎಂದು ಹೇಳಿಸಿಕೊಳ್ಳುವುದಕ್ಕೆ ಮಾತ್ರ ಆತ ಒಪ್ಪುವಂತಿರಲಿಲ್ಲ.

ನೀವು ಅವನ ಮನೆಗೆ ಹೋದರೆ ಅದ್ಧೂರಿಯ ಊಟ ಉಪಚಾರ ನಡೆಯುತ್ತದೆ. ಆದರೆ ಒಪ್ಪವಿಲ್ಲ, ಓರಣವಿಲ್ಲ; ಯಜಮಾನನ ಮನಸ್ಸೇ ಮನೆಯಲ್ಲಿರುವುದಿಲ್ಲ. ಎಲ್ಲವೂ ಕೃತಕವಾಗಿ ಪ್ರತಿಯೊಂದರಲ್ಲಿಯೂ ಒಂದು ತೆರನಾದ ದುಂದೂ ಅಸಡ್ಡೆಯೂ ಕಾಣಬರುತ್ತದೆ. ಒಟ್ಟಿನಲ್ಲಿ ಆತನದೆಲ್ಲ ಪ್ರಚ್ಛನ್ನದೈನ್ಯವಾಗಿಯೂ, ಬಂಧುರ ದಾರಿದ್ರ್ಯವಾಗಿಯೂ ಭಾಸವಾಗುತ್ತದೆ. ಹಾಸಿಗೆ ಇದ್ದಷ್ಟು ಕಾಲು ಚಾಚುವವನ ಗೃಹಕೃತ್ಯದಲ್ಲಿ ಕಾಣಬರುವ ಒಪ್ಪ ಓರಣಗಳಿಗೆ ಬದಲಾಗಿ ಆತನಲ್ಲಿ ಸ್ವೇಚ್ಛಾವೃತ್ತಿಯ ದುಂದುಗಾರಿಕೆ ವ್ಯಕ್ತವಾಗುತ್ತದೆ.

ನಮ್ಮ ದೇಶದ ಸಾಹುಕಾರರಲ್ಲಿ ಇಂತಹ ಮನೆವಾರ್ತೆ ನಡಸುವವರೆ ಹೆಚ್ಚು ಮಂದಿ. ಕೆಲವೆ ಸಿಪಾಯಿಗಳಿರುವಾಗ ಕಣಿವೆಯ ರಕ್ಷಣೆಯಲ್ಲಿ ತೊಡಗುವ ಬದಲು ಸೀಮೆಯ ರಕ್ಷಣೆಯಲ್ಲಿ ತೊಡಗುವ ಸೇನಾಪತಿಯ ಉದ್ಯಮದಂತೆ ಇಂತಹವರ ಗೃಹಕೃತ್ಯವೂ ಹಾಸ್ಯಾಸ್ಪದವಾಗುತ್ತದೆ. ಹೀಗೆ ಸಾಲಗಾರರ ಪಾಲಿನ

ಆಸ್ತಿಗೂ ತಾನೆ ಯಜಮಾನನೆನಿಸಿ ಸಾಹುಕಾರಿಕೆಯ ಹೆಸರಿಗಾಗಿಯೇ ಆಡಂಬರದಿಂದ ಅಪವ್ಯಯ ಮಾಡುವುದು ಕೇವಲ ದುರಹಂಕಾರವೇ ಸರಿ. ಇಂತಹ ದುರಹಂಕಾರಿ ದುಂದುಗಾರಿಕೆಯಿಂದಲೇ ಬಹುಬೇಗ ಅಪಕೀರ್ತಿಗೆ ಈಡಾಗುತ್ತಾನೆ. ಇಷ್ಟಾದರೂ ನಮ್ಮ ಈ ಗ್ರೇಟ್ ಬ್ರಿಟನ್ನಿನಲ್ಲಿ ಯಾವ ಪಟ್ಟಣದಲ್ಲಿ ನೋಡಿದರೂ ಈ ದುಂದಿನ ಸರ್ವನಾಶಕಾರಕವಾದ ಮಹಾಪ್ರಮಾದ (ಈ ಮಾತು ತುಂಬಾ ಮೃದುವಾಯಿತೇನೋ) ದಲ್ಲಿ ಬಿದ್ದವರೇ ನಮಗೆ ವಿಶೇಷವಾಗಿ ಕಾಣಬರುತ್ತಿದ್ದಾರೆ. ಸಾಹುಕಾರಿಕೆಯ ನಿಜಸ್ಥಿತಿಯನ್ನು ಹೇಳಿಕೊಳ್ಳಲು ನಾಚಿಕೊಂಡು ಇಂತಹ ಬಂಡವಾಳವಿಲ್ಲದ ಬಡಾಯಿಗಳಾಗಿರುವ ಬದಲು ಪ್ರಾಮಾಣಿಕರಾಗಿ ಬಾಳುವುದಾದರೆ ಸ್ವಲ್ಪ ಕಾಲದಲ್ಲಿಯೆ ಇಂತ ಹವರ ಬೊಗಳೆಯ ವೈಭವವು ನಿಜಕ್ಕೂ ವೈಭವವಾಗುವುದರಲ್ಲಿ ಸಂಶಯವಿಲ್ಲ.

ಶ್ರೀಕಾಂತನಿಗೆ ಹದಿನೈದುನೂರು ಪೌಂಡುಗಳ ವರಮಾನದ ಆಸ್ತಿ ಇದೆ. ಆದರೆ ಅದು ಆರುಸಾವಿರ ಪೌಂಡುಗಳ ಸಾಲಕ್ಕೆ ದೀಡಾಗಿದೆ. ಸಾಲಕ್ಕೆ ಹೋಗುವ ಆಸ್ತಿಯಷ್ಟನ್ನು ಮಾರಿದರೆ ಈಗ ಆ ಭಾಗದ ಆಸ್ತಿಯ ಯಜಮಾನಿಕೆಗಾಗಿ ವೃಥಾ ವ್ಯಯವಾಗುತ್ತಿರುವ ಪೌಂಡಿನಲ್ಲಿ ನಾಲ್ಕು ಷಿಲ್ಲಿಂಗಿನ ಉಳಿತಾಯವಾದರೂ ಆಗುತ್ತದೆ. ಹೀಗೆಂದು ಅವನನ್ನು ಒಪ್ಪಿಸುವುದು ಮಾತ್ರ ಯಾರಿಗೂ ಸಾಧ್ಯವಾಗಿಲ್ಲ. ಹೀಗೆ ಮಾಡಿದರೇನೋ ಶ್ರೀಕಾಂತನ ದೆಸೆ ತಿರುಗೀತು. ಆದರೆ ತನ್ನ ಕಣ್ಣು ಮುಂದೆಯೇ ಮುಂದಕ್ಕೆ ಬಂದ ಕೇವಲ ಹನ್ನೆರಡುನೂರರ ವರಮಾನವಿರುವ ಸುಧಾಮನಿಗೆ ತಾನು ಸರೀಕನಾಗಿ ಬಾಳಬೇಕಾಗುವುದಲ್ಲ! ಶ್ರೀಕಾಂತನಿಗೆ ಇದಕ್ಕಿಂತ ವರ್ಷ ವರ್ಷವೂ ಶ್ರೀಮಂತರಾದ

ಭಿಕಾರಿಗಳನ್ನು ಪ್ರಪಂಚಕ್ಕೆ ತರುವುದೇ ಹೆಚ್ಚು ಶ್ರೇಯಸ್ಕರ! ಪರಿಣಾಮವಾಗಿ ಪ್ರತಿ ಹನ್ನೆರಡು ತಿಂಗಳಿಗೊಮ್ಮೆ ಒಬ್ಬೊಬ್ಬ ಗೇಣಿದಾರನ ಗೇಣಿಯ ವಿಲೇವಾರಿಗೆ ಒಂದೊಂದು ಮಾಣಿಯ ಅವತಾರ!

ಶ್ರೀಕಾಂತ, ಸುಧಾಮರು ಅಕ್ಕಪಕ್ಕದಲ್ಲಿಯೆ ಇದಾರೆ. ಆದರೇನು! ಒಬ್ಬರಂತೆ ಒಬ್ಬರಿಲ್ಲ. ಸುಧಾಮ ಎಲ್ಲಿ ನಾನು ಬಡವನಾಗುವೆನೊ ಎಂದು ಬಡತನಕ್ಕೆ ಹೆದರಿ ಬಾಳಿದರೆ ಶ್ರೀಕಾಂತ ಎಲ್ಲಿ ಬಡವನೆಂದು ನನ್ನನ್ನು ಪರಿಗಣಿಸುವರೋ ಎಂದು ಬಡತನಕ್ಕೆ ನಾಚಿ ಬಾಳುತ್ತಿದ್ದಾನೆ. ಇಬ್ಬರ ಉದ್ದೇಶವೂ ಹತ್ತಿರ ಹತ್ತಿರ ಒಂದೇ ಆದರೂ ಇಬ್ಬರಿಗೂ ಬಡತನವೆ, ಒಂದು ಓಡು ಗಾಗಿ; ಇಬ್ಬರ ಜೀವನರೀತಿಯೂ ತುಂಬ ದೂರ ದೂರವಾಗು ತ್ತಿದೆ. ಬಡತನದ ಸಿಗ್ಗಿನಿಂದಾಗಿ ಶ್ರೀಕಾಂತ ಅನವಶ್ಯಕವಾದ ಸಾಮಾನು ಸರಂಜಾಮುಗಳಲ್ಲಿಯೂ ಅಪವ್ಯಯಗಳಲ್ಲಿಯೂ ಅದ್ಧೂರಿಯ ಆದರಾತಿಥ್ಯಗಳಲ್ಲಿಯೂ ಪ್ರವೃತ್ತನಾದರೆ ಬಡತನದ ಭೀತಿಯಿಂದಾಗಿ ಸುಧಾಮನು ಅತ್ಯವಶ್ಯವಾದ ನಿರಾಡಂಬರದ ಉಪಕರಣಗಳನ್ನು ಇಟ್ಟುಕೊಂಡು ಊಳಿಗದವರಿಲ್ಲದೆ ತಾನೆ ದವಸ ಧಾನ್ಯಗಳನ್ನು ಮಾರುತ್ತ ಕೂಲಿಯವರ ಮೇಲ್ವಿಚಾರಣೆ ನಡೆಸುತ್ತ ತಾನೂ ಕೂಲಿಯವನಾಗಿ ದುಡಿಯುತ್ತಿದ್ದಾನೆ. ಬಡ ತನಕ್ಕೆ ನಾಚಿ ಶ್ರೀಕಾಂತ ದಿನದಿನಕ್ಕೆ ಅವರ ಹತ್ತಿರ ಹತ್ತಿರ ಬಂದರೆ ಬಡತನಕ್ಕೆ ಹೆದರಿ ಸುಧಾಮ ದಿನದಿನಕ್ಕೆ ಅದರಿಂದ ದೂರ ದೂರವಾಗುತ್ತಾನೆ.

ಇವರಿಬ್ಬರ ಉದ್ದೇಶಗಳೂ ಅತಿಗೆ ಹೋದರೆ ದುಂದುವೆಚ್ಚ ಕೃಪಣತೆಗಳಲ್ಲಿ ಕೊನೆಗೊಳ್ಳಬೇಕಾಗುತ್ತವೆ. ಸಿರ್ಧನತೆಯ ದಿಗಿಲಿ ನಲ್ಲಿ ಚಕ್ರಬಡ್ಡಿ, ಸಟ್ಟಾ ವ್ಯಾಪಾರ, ಜಪ್ತಿ ದಬ್ಬಾಳಿಕೆಗಳ ಬೀಜ

ವಿದ್ದರೆ ಆದರ ಸಿಗ್ಗಿನಲ್ಲಿ ಡಬ್ಬು ಡಬ್ಬಾಳಿಕೆ ದುಂದು ಸ್ವೇಚ್ಛಾ ಲೋಲುಪ್ತಿಗಳ ಬೀಜವಿವೆ. ವ್ಯವಹಾರಜ್ಞನಿಗೆ ಈ ಎರಡು ಅತಿರೇಕಗಳೂ ಅಶ್ರೇಯಸ್ಕರ. ನಮ್ಮ ಸರೀಕರ ಅಂತಸ್ತಿಗೆ ಅನುಗುಣವಾಗಿ ಬಾಳುವೆ ಮಾಡಲು ಬೇಕಾಗುವಷ್ಟನ್ನು ಮಾತ್ರ ವ್ಯಯ ಮಾಡಬೇಕು. ಆದರ ಮೇಲಣ ಭೋಗೋಪಕರಣಗಳ ತೃಷ್ಣೆ ಅವಶ್ಯೋಪಕರಣಗಳ ಅಭಾವದ ಲೋಭ ಬುದ್ಧಿಯಷ್ಟೇ ಅಧಾರ್ಮಿಕ.

ಇವೆರಡೂ ನಿಸರ್ಗ ಸಹಜವಾದ ಸದ್ಬುದ್ಧಿಯ ಕಲಾಭಿರುಚಿಗೆ ಹೊಂದಿಕೆಯಾಗದ ವ್ಯಾಪಾರವೆನ್ನುವುದರಲ್ಲಿ ಅಡ್ಡಿಯಿಲ್ಲ. ಈ ತೆರನಾದ ವಿಚಾರಾಸಕ್ತಿಯಿರುವ ಕೌಲಿಯ ಕೃತಿಗಳನ್ನು ನಾನು ತುಂಬ ಪ್ರೀತಿಯಿಂದ ಓದುವುದುಂಟು. ಬುದ್ಧಿಶಕ್ತಿಯಲ್ಲಿ ಹೇಗೋ ಹಾಗೆ ಹೃದಯದ ಔದಾರ್ಯದಲ್ಲಿ ಕೂಡ ಆತ ಇತರ ದೊಡ್ಡ ಮನುಷ್ಯರಿಗಿಂತ ಮೇಲಾಗಿದಾನೆ. ಈ ಕವಿಯ ಮೃದು ಸ್ವಭಾವವನ್ನೂ, ಮಧ್ಯವರ್ತಿ ಮನೋಭಾವವನ್ನೂ ಹೃದಯಂಗಮವಾಗಿ ವಿವರಿಸಿರುವುದು ಸಂಸ್ಕೃತಿ ಸಂಪನ್ನನಾದ ಪ್ರಕಟಣಕಾರನ ವಿಶೇಷ ಲಕ್ಷಣ. ಹೀಗೆ ಪ್ರಕಟಣಕಾರನು ತನ್ನ ಸ್ನೇಹಿತನನ್ನು ಏಕಕಾಲದಲ್ಲಿ ಪ್ರಸಿದ್ಧ ಸಾಹಿತಿಯನ್ನಾಗಿಯೂ, ಒಳ್ಳೆಯ ಸರಸಿಯನ್ನಾಗಿಯೂ ಚಿತ್ರಿಸಿದ್ದಾನೆ. ಅಲ್ಲದೆ ಕೌಲಿಯು ನಿರ್ದೇಶಿಸಿದ್ದ, ಅಸಭ್ಯ ಮಹಾಜನಗಳಂತಹವರ ಬಡತನದ ಚಿತ್ರವನ್ನು ತುಂಬ ಸೊಗಸಾಗಿಯೂ ಸಹಜವಾಗಿಯೂ ನಿರೂಪಿಸಿದ್ದಾನೆ. ಜನಸಾಮಾನ್ಯರ ಧ್ಯೇಯ ಧೋರಣೆಗಳ ವಿಷಯವಾಗಿ ತನ್ನ ಅಭಿಪ್ರಾಯವನ್ನು ತಿಳಿಸುವಾಗ, ಪ್ರಪಂಚದ ಮಹೋನ್ನತಿಯ ಕಾಲದಲ್ಲಿ ಬಾಳಿದ ಮಹಾಮೇಧಾವಿಗಳ ಹೇಳಿಕೆಗಳನ್ನು ಉದ್ಧರಿಸುವುದು; ಅಂತಹುದೇ ಆಸೆ ಆಕಾಂಕ್ಷೆಗಳನ್ನುಳ್ಳವರಿಗಂತೂ ತುಂಬ ತೃಪ್ತಿಕರವಾಗಿದೆ.

ರೋಜರ್ ಮಹಾಶಯನ ಹಿರಿಯರು ಹೇಳುತ್ತಿದ್ದಂತೆ ಪ್ರತಿಯೊಬ್ಬರೂ ಹಣದ ಒಂದು ಪರಮಾವಧಿಯನ್ನು ಗೊತ್ತು ಮಾಡಿ, ಅದನ್ನು ಮೀರುವುದಿಲ್ಲವೆಂದು ಇಟ್ಟುಕೊಳ್ಳುವುದು; ತೀರ ಕೀಳಾದ ಸೂತ್ರವಾಗಲಾರದೆಂದು ನನಗೆ ತೋರುತ್ತದೆ. ಇದರಿಂದ ನಿರೀಕ್ಷಿತ ಮೊತ್ತಕ್ಕಿಂತ ಕಡಿಮೆ ದುಡಿದರೆ ನಿಶ್ಚಿಂತೆಯಾಗಿ ಬಾಳುವೆ ಮಾಡಬಹುದು. ಹೆಚ್ಚು ದುಡಿದರೆ ಪರೋಪಕಾರಕ್ಕಾಗಿ ವಿನಿಯೋಗಿಸಬಹುದು. ಇಂತಹ ಸಂಸ್ಕಾರವಿರುವವನು ತನಗಿಂತಲೂ ಮೇಲಾಗಿರುವ ಚಿಂತಾಮಗ್ನರಾದ ಐಶ್ವರ್ಯವಂತರನ್ನು ನೋಡಿ ನಿಷ್ಕಾರಣವಾಗಿ ಕರುಬುವುದೂ ಇಲ್ಲ. ತನಗಿಂತ ಕೆಳಗಿರುವ ನಿಶ್ಚಿಂತರನ್ನು ನೋಡಿ ಅಕ್ಷಮ್ಯವಾದ ತಾತ್ಸಾರಕ್ಕೆ ಎಡೆಗೊಡುವುದೂ ಇಲ್ಲ ಇದು ಉತ್ತರಮುಖಿಯೊಡನೆ ಪ್ರಯಾಣಮಾಡುವ ನಾವಿಕನ ಸಮುದ್ರಯಾನದಂತೆ ಒಂದು ಯೋಜನೆಗೆ ಒಳಪಟ್ಟುದಾಗಿರುತ್ತದೆ. ಅದಲ್ಲದೆ ಕೇವಲ ಲಾಭಬಡಕತನದಿಂದ ಸದಾಕಾಲವೂ ಕಕಮಕ ಹಿಡಿದವರಂತೆ ಆಡುವುದಾಗಲೀ ವಿಧಿಯ ಅನಿರೀಕ್ಷಿತ ಆಘಾತಗಳಿಗೆಂದು ಅನವಶ್ಯಕವಾಗಿ ಆಯುಧಪಾಣಿಗಳಾಗುವುದಾಗಲೀ ನೀರಸವಾದ ಯಾಂತ್ರಿಕ ಪ್ರವೃತ್ತಿಯೇ ಸರಿ. ಈ ಪ್ರವೃತ್ತಿಯಿಂದ ಮಾನವನ ಮಾರ್ಗದರ್ಶನಕ್ಕೆ ಸಹಜವಾದ ಪ್ರೇರಣೆಯೊದಗಿದೆ ನಮ್ಮ ಆಲೋಚನೆಗೆ ಅನರ್ಹವೂ ಅವಗಾಹನೆಗೆ ಅಯೋಗ್ಯವೂ ಆದವುಗಳ ಕಡೆಗೆ ಅಭ್ಯಾಸಬಲದಿಂದ ಸಾಗುವುದಾಗುತ್ತದೆ. ಬಹುಶಃ ರೋಜರನ ಉದಾರಾಶ್ರಯದಲ್ಲಿ ಹಾಯಾಗಿರುವ ನನಗೆ ಸರ್ವಜನ ಸನ್ಮಾನ್ಯವಾದ ಸುಖಸಾಧನದ ಬಗ್ಗೆ ಈ ತೆರನಾದ ಅನಾಸಕ್ತಿ ಬಂದಿದ್ದರೂ ಬಂದಿರಬಹುದು. ಆದರೆ ಈಗ ನಾನು ಪ್ರಕೃತಿಯ ರಮಣೀಯವಾದ ದೃಶ್ಯವಿಶೇಷಗಳಿಂದ ಆವೃತವಾಗಿರುವ

ಈ ಸುಮನೋಹರ ಲತಾಮಂಟಪದಲ್ಲಿ ವಿರಮಿಸಿರುವುದರಿಂದ ಜನಜಂಗುಳಿಯ ದುರಭಿಮಾನದಿಂದ ದೂರವಾಗಿರುವ ಭವನಗಳಲ್ಲಿ ಹೀಗೆಯೇ ಕೆಲಕಾಲವಿರಲು ನನಗೆ ಯಾವ ತೀವ್ರವಾದ ಪ್ರಚೋದನೆಯೂ ಕಾಣಲಿಲ್ಲ. ಅಲ್ಲದೆ ಈ ಲೇಖನವನ್ನು ಕೌಲಿಯ ಪದ್ಯವೊಂದರಿಂದ ಮುಕ್ತಾಯಮಾಡುವಷ್ಟರ ಮಟ್ಟಿಗೆ ಸಧ್ಯಕ್ಕೆ ಬರಹದಲ್ಲಿಯಾದರೂ ನಾನೀಗ ತಾತ್ವಿಕನಾಗಿದ್ದೇನೆ

ಉನ್ನತೋನ್ನತ ಪದವಿಗೇರಿದ
ಕೀಳು ಬಯಕೆಯು ನನ್ನ ಮನವನು
ಎಂದಿಗಾದರು ಮರುಳುಗೊಳಿಸುವುದಾದರೆ
ದಿವ್ಯಶಾಂತಿಯ ನೀಡುತಿರುವೀ
ನನ್ನ ಒಲುಮೆಯ ನಮ್ರಜೀವನ-
ಸಾಧನಂಗಳ ದೂರವಾಗಿಸು ದೇವರೆ.

## ಮಾತುಗಾರಿಕೆ

ಮೂರ್ತಿ ಕಾಲೇಜಿಗೆ ಬಂದಾಗ ಹದಿನೈದು ವರ್ಷ. ತಾರುಣ್ಯದ ಉತ್ಸಾಹದ ಜೊತೆಗೆ ವ್ಯಾಸಂಗದಲ್ಲಿ ಹೆಚ್ಚಿನ ಆಸಕ್ತಿಯೂ ಇದ್ದುದರಿಂದ ಆತನ ಮಾತುಕತೆಗಳಲ್ಲೆಲ್ಲ ಒಂದು ವಿಲಕ್ಷಣವಾದ ರೀತಿ ಕಾಣಬರುತ್ತಿತ್ತು. ಜೊತೆಗಾರರೊಡನೆ ನಾಲಗೆ ಬಿಗಿ ಹಿಡಿಯಲಾರದಷ್ಟು ಉತ್ಸಾಹ, ಆದರೆ ಪ್ರಪಂಚ ಜ್ಞಾನ ಸಾಲದು. ಹೀಗಾಗಿ ಎಲ್ಲರ ಹಾಗೆ ಮಾತನಾಡುವುದು ಹೇಗೆನ್ನುವುದೇ ಆತನಿಗೆ ತಿಳಿಯದೇ ಹೋಯಿತು.

ಒಂದೊಂದಾವರೆ ವರುಷದ ಓದು ಮುಗಿದ ಮೇಲೆ ಒಂದೆರಡು ತಿಂಗಳು ನಮ್ಮ ಜೊತೆ ಇದ್ದು ಹೋಗುವ ಸಲುವಾಗಿ ಮೂರ್ತಿ

ವೊನ್ನೆ ಹಳ್ಳಿಗೆ ಬಂದ. ಆ ರಾತ್ರಿ ಊಟಕ್ಕೆ ಕುಳಿತಾಗ ಆತನ ಮಾತುಕತೆಗಳಿಂದ ನಮಗೆಲ್ಲ ಒಂದು ಹೊಸ ಹುರುಪು ಬಂತು. ಆ ಮಾತು ಈ ಮಾತು ಆಡುತ್ತ, ಕೆಲವರು ಪ್ರಕೃತಿವಿಜ್ಞಾನಿಗಳು ಚಂದ್ರನಿಗೂ ಕಾಡುಕೋಳಿಗೂ ಸಂಬಂಧವನ್ನು ಕಲ್ಪಿಸಿದಾರೆ ಎಂದು ಮೂರ್ತಿ ಹೇಳಿದ. ಈ ಮಾತು ಕೇಳಿ ಅವನ ತಂಗಿ ಘೊಳ್ಳೆಂದು ನಕ್ಕಳು. ಮೂರ್ತಿ ರೇಗಿಬಿದ್ದು, ಚಂದ್ರ ಎಷ್ಟು ದೊಡ್ಡದಾಗಿದಾನೆ, ಅವನಿಗೂ ನಕ್ಷತ್ರಗಳಿಗೂ ಎಷ್ಟು ದೂರ ಎಂದು ಹಲವಾರು ಪ್ರಶ್ನೆಗಳನ್ನು ಹಾಕಿ ತಂಗಿಗೆ ಅವಮಾನ ಮಾಡಿದ್ದಲ್ಲದೆ ಒಂದೊಂದು ಪ್ರಶ್ನೆಗೂ ತಂಗಿ ತಬ್ಬಿಬ್ಬಾದಾಗ, ಅವಳ ಅಜ್ಞಾನಕ್ಕೆ ಕೊಂಕು ನಗೆ ನಗುತ್ತ ನನಗೆ ಕಣ್ಣು ಮಿಟಕಿಸುತ್ತಿದ್ದ. ಮಾತಿನಲ್ಲಿ ಮೂರ್ತಿಯೇ ಗೆದ್ದನೆಂದು ತಾಯಿಗೆ ತುಂಬಾ ಸಂತೋಷ. ಸೇವಕರಂತೂ ಚಿಕ್ಕಬುದ್ಧಿಯವರ ವಿದ್ಯಾಪ್ರೌಢಿಮೆಗೆ ಬೆರಗಾಗಿ ಹೋದರು. ತನ್ನ ಪ್ರಥಮ ದಿಗ್ವಿಜಯದಿಂದಾದ ಹಿಡಿಸಲಾರದ ಹಿಗ್ಗಿನಲ್ಲಿ, ಮೂರ್ತಿ ಆ ವಾರವೆಲ್ಲ ವಿರೋಧಾಭಾಸಗಳ ಅಸಂಬದ್ಧ ಪ್ರಲಾಪಗಳಲ್ಲಿಯೆ ಕಾಲಕಳೆದ. ತಂಗಿ ಮುದ್ದು ಮಾಡುವ ನಾಯಿಮರಿಯನ್ನು ಚಿವುಟಿ ಹಾಗೆ ಚಿವುಟಿದರೂ ಅದಕ್ಕೆ ನೋವಾಗುವುದಿಲ್ಲವೆಂದು ವಾದಮಾಡುವುದು ಅವನ ದಿನ ನಿತ್ಯದ ಗೇಲಿಯಾಗಿತ್ತು. ಹುಡುಗಿಯರೆಲ್ಲ ರಿಬ್ಬನ್ನುಗಳನ್ನು ಆರಿಸಿಕೊಳ್ಳುತ್ತಿದ್ದರೆ ಎಲ್ಲ ರಿಬ್ಬನ್ನುಗಳ ಬಣ್ಣವೂ ವಸ್ತುತಃ ಒಂದೇ ಎಂದು ವಾದ ಹೂಡುತ್ತಿದ್ದ. ತನ್ನ ಮಗನ ಜಾಣ್ಮೆಯ ವಿಷಯದಲ್ಲಿ ತುಂಬ ಸಂತೋಷಪಡುತ್ತಿದ್ದ ನನ್ನ ಸಹಧರ್ಮಿಣಿಯೇ ಒಮ್ಮೆ ಆತನ ಮೇಲೆ ರೇಗಿ ಬೀಳುವ ಪ್ರಸಂಗ ಬಂತು... ಲ್ಲಿದ್ದಳು. ಕಾಫಿ ಕಾಯಿಸುವುದಕ್ಕಾಗಿ ಒಲೆ ಹೊತ್ತಿಸುತ್ತಿದ್ದಾಗ ಅಕಸ್ಮಾತ್ತಾಗಿ ಆಕೆ ಕೈ ಸುಟ್ಟುಕೊಂಡಳು. ಇದೇ ಸಮಯ

ಎಂದು, ತಾಯಿ ಸಂಕಟಪಡುತ್ತಿದ್ದರೂ ಮಗ ಅವಳಿಗೆ ಬೆಂಕಿಯಲ್ಲಿ ಶಾಖ ಎಂಬಂಥ ವಸ್ತುವೇನೂ ಇಲ್ಲ ಎಂದು ಉಪದೇಶ ಮಾಡಿದ. ಒಟ್ಟಿನಲ್ಲಿ 'ನಾನು ಮನೆಯುವರನ್ನೆಲ್ಲ ಮೊದಲಿಗಿಂತ ಬುದ್ಧಿವಂತರನ್ನಾಗಿ ಮಾಡಿದೆ' ಎಂದು ಮೂರ್ತಿ ಹೇಳಿಕೊಳ್ಳದ ದಿನವೇ ಇಲ್ಲವೆನ್ನುವಂತಾಯಿತು.

ಮನೆಗೆ ಬಂದ ಹಳ್ಳಿಯುವರೊಡನೆ ಮೂರ್ತಿ ಮಾತನಾಡುತ್ತಿದ್ದ ರೀತಿಯಿಂದ ಮಾತ್ರ ನನಗೆ ತುಂಬ ನೋವಾಯಿತು. ಅಂತಹ ಸಂದರ್ಭಗಳಲ್ಲೆಲ್ಲ ಮೂರ್ತಿ ತಾನೆ ಗುಂಪಿನವರೆಲ್ಲರ ಬಾಯಿ ಎನ್ನುವ ಹಾಗೂ ಮನರಂಜನೆಗೆ ತನ್ನ ಸಮಾನರಿಲ್ಲ ಎನ್ನುವ ಹಾಗೂ ಭಾವಿಸಿಕೊಂಡು ತಮ್ಮ ಕಾಲೇಜು ವಿದ್ಯಾರ್ಥಿ ನಿಲಯದ ಅಡಿಗೆಯುವನ ಅಸಂಬದ್ಧವಾದ ಅಷ್ಟಾವಕ್ರಗಳನ್ನೆಲ್ಲ ಹೇಳಿ ವಿನೋದಗೊಳಿಸುತ್ತಿದ್ದ. ಈ ಅಡಿಗೆಯುವನು ಮೂರ್ತಿಯ ಮನಸ್ಸಿನ ಮೇಲೆ ವಿಶೇಷ ಪ್ರಭಾವವನ್ನು ಬೀರಿರುವ ಹಾಗೆ ನನಗೆ ತೋರಿತು. ಆದರೆ ಹತ್ತಾರು ಸಲ ಹೇಳಿ ಹೇಳಿ ಹಳಸಿಹೋದ ತನ್ನ ಕತೆಗೆ, ತಾನಲ್ಲದೆ ಮತ್ತಾರೂ ನಗುವುದಿಲ್ಲವೆನ್ನುವುದರ ಅರಿವಾಗುವವರೆಗೂ, ಮೂರ್ತಿಗೆ ತನಗೆ ಪ್ರಿಯುವಾದ ಅಡಿಗೆಯುವನ ಕಥೆ ಉಳಿದವರಿಗೆ ಅಪ್ರಿಯುವಾದೀತೆಂಬುದು ಹೊಳೆಯುದೆ ಹೋಯಿತು.

ಕಾಲ ಬರುವುದಕ್ಕೆ ಮೊದಲೇ ಹೂಬಿಡುವ ಗಿಡದ ಹಾಗಾದನಲ್ಲ ಎಂದು ಉದ್ದಕ್ಕೂ ನನಗೆ ಮೂರ್ತಿಯು ಬಗ್ಗೆ ಮರುಕವಾಯಿತು. ಅಕಾಲದಲ್ಲಿ ಹೇರಳವಾಗಿ ಬಂದ ಹೂ ಅಪೂರ್ವವಾದ ಹಣ್ಣಿಗೆ ಸೂಚನೆಯಲ್ಲವೆ ಎಂದು ನೋವಾಯಿತು.

ಮೂರ್ತಿಯು ಮಾತುಗಾರಿಕೆಯಲ್ಲಿ ಉದ್ದಕ್ಕೂ ತೋರಿ ಬರುತ್ತಿದ್ದ ಒಣ ಪಾಂಡಿತ್ಯದ ಹಂಬಲವನ್ನು ಮುರಿಯುವುದ

ಕ್ಕಾಗಿ ಒಂದು ಸಂಜೆ ನಾನು ಅವನನ್ನು ಗಾಳಿ ಸಂಚಾರಕ್ಕೆ ಕರೆದು ಕೊಂಡು ಹೊರಟೆ. ದಾರಿಯಲ್ಲಿ ಒಬ್ಬ ದೊಡ್ಡ ಲೇಖಕನಿಂದ ನಾನು ಕಲಿತುಕೊಂಡಿದ್ದ 'ಬುದ್ಧಿವಂತರೊಡನೆ ವಿಚಾರಮಾಡಿ ಪಾಮರರೊಡನೆ ಮಾತನಾಡು' ಎಂಬ ಸೂತ್ರವೊಂದನ್ನು ಆತನಿಗೆ ಬಹು ಮಾರ್ಮಿಕವಾಗಿ ಉಪದೇಶ ಮಾಡಿದೆ. ಈ ನು ಇದಕ್ಕೆ ತೀರಾ ವಿರುದ್ಧವಾಗಿದ್ದುದರಿಂದಲೇ ತಿಳಿಯದವರು ಕೂಡ ತನ್ನನು ನೋಡಿ ನಗುವಂತಾಯಿತೆನ್ನುವುದು ಮೂರ್ತಿಯ ಕುಶಾಗ್ರ ಬುದ್ಧಿಗೆ ಬಹುಬೇಗ ಗ್ರಹಿಕೆಯಾಯಿತು. ಮುಂದೆ ತನ್ನ ಅಭಿ ಪ್ರಾಯಗಳನ್ನು ತನ್ನಲ್ಲಿಯೇ ಇಟ್ಟುಕೊಂಡು, ಜನ ಸಾಮಾನ್ಯರಿಗೆ ಅರ್ಥವಾಗುವ ಹಾಗೆ, ಅವರವರ ಚಿತ್ರವೃತ್ತಿಗೆ ಅನುಸಾರವಾಗಿ ಮಾತನಾಡುವ ಎಚ್ಚರಿಕೆ ವಹಿಸುತ್ತೇನೆಂದು ಮೂರ್ತಿ ಹೇಳಿದ. ಅಷ್ಟೇ ಅಲ್ಲ, ಅವನ ಮಾತುಗಾರಿಕೆಯನ್ನು ಕುದುರಿಸಬಹುದೆಂದು ನನಗೆ ತೋರಿದ ಬೇರೆ ಯಾವ ನೀತಿ ನಿಯಮಗಳಿದ್ದರೂ ಅವು ಗಳನ್ನು ತನಗೆ ತಿಳಿಸಬೇಕೆಂದು ನನ್ನನ್ನು ಕೇಳಿಕೊಂಡ. ನಾನು ಯೋಚನೆ ಮಾಡುತ್ತೇನೆ ಎಂದೆ. ಆತನ ಮೇಲೆ ತುಂಬ ಅಭಿ ಮಾನವಿದ್ದುದರಿಂದ ಅವನ ಕೋರಿಕೆಯಂತೆ ಕೆಲವೊಂದು ನಿಯಮಗಳನ್ನು ಮಾರನೆ ದಿನ ಬೆಳಿಗ್ಗೆ ಬರೆದುಕೊಟ್ಟೆ. ಬಹುಶಃ ಈಗ ಎಲ್ಲರೊಡನೆ ಹೊಂದಿಕೊಂಡು ಹೋಗುವ ಅವನ ಈ ಸ್ಥಿತಿಗೆ ನಾನು ಹೇಳಿಕೊಟ್ಟ ನಿಯಮಗಳು ಕೆಲಮಟ್ಟಿಗೆ ನೆರವಾಗಿರ ಬಹುದು.

ಪರಸ್ಪರ ವಿಚಾರ ವಿನಿಮಯ ಎನ್ನುವುದಾಗಲೀ ಮಾತು ಕತೆ ಎನ್ನುವುದಾಗಲೀ ಬುದ್ಧಿಶಕ್ತಿಯ ಮಹದನುಗ್ರಹವೆಂದು ತತ್ವಶಾಸ್ತ್ರಜ್ಞರು ಎಂದಿನಿಂದ ಹೇಳುತ್ತಿದ್ದಾರೆ. ಅಲ್ಲದೆ ಈ ಶಕ್ತಿಯ ಏಕಮಾತ್ರ ಸಾಧನವೇ ಮಾನವಕುಲವನ್ನು ಪಶು ಸೃಷ್ಟಿಯ ಅಂತಸ್ತಿನಿಂದ ಉದ್ಧಾರಮಾಡಿದೆ.

ದಿನ ಬೆಳಗಾದರೆ ವಿಧಿಯಿಲ್ಲದೆ ಮೇಲಿಂದ ಮೇಲೆ ಬಳಸ ಬೇಕಾಗಿರುವ ಆಶುಭಾಷಣವೆನ್ನುವುದು ಸರ್ವಜನಾದರಣೀಯ ವಾದುದಾದರೂ ಈ ಕಲೆಯಲ್ಲಿ ನಿಷ್ಣಾತರಾದವರು ತೀರ ವಿರಳ.

ಅನೇಕರ ಮಾತುಕತೆ ಹಿತವಾಗುವುದಿಲ್ಲ. ಪಾಂಡಿತ್ಯದ ಅಥವಾ ವಿಷಯಜ್ಞಾನದ ಅಭಾವ ಇದಕ್ಕೆ ಅಷ್ಟಾಗಿ ಕಾರಣವಲ್ಲ; ಕುಲೀನ ಶಿಕ್ಷಣವಾಗಲಿ ವಿವೇಚನಾಶಕ್ತಿಯಾಗಲಿ ಇಲ್ಲದಿರುವುದೇ ಮುಖ್ಯ ಕಾರಣ ಎನ್ನಬಹುದು.

ನಿಮ್ಮ ಮಾತಿನಿಂದ ಇನ್ನೊಬ್ಬರಿಗೆ ಸಂತೋಷವಾಗಬೇಕಾ ದರೆ ಮಾತಿನಲ್ಲಿ ವೈಯಕ್ತಿಕವಾದ ಭಾವೋದ್ರೇಕಗಳಿಗಾಗಲಿ ಅಹಂಭಾವಗಳಿಗಾಗಲಿ ಎಡೆಗೊಡದೆ, ಕೇಳುವವರಿಗೆ ಹಿತವಾಗು ವಂತೆಯೂ, ತಿಳಿವಳಿಕೆಯುಂಟಾಗುವಂತೆಯೂ ಮಾತಾಡಬೇಕು. ಹಿತವಾಗುವಂತೆಯಾಗಲಿ, ತಿಳಿವಳಿಕೆಯುಂಟಾಗುವಂತೆಯಾಗಲಿ ಮಾತನಾಡಲು ಯತ್ನಿಸಿದರೆ ಮಾತುಗಾರಿಕೆ ಲೀಲಾಜಾಲವಾಗಿ ಸಾಗುತ್ತದೆ. ಹೀಗೆ ಮಾತನಾಡುವವನು ಇತರರು ನಡುನಡುವೆ ಮಾತಿಗೆ ಅಡ್ಡಿಬಂದರೂ ರೇಗುವುದಿಲ್ಲ. ತಾನು ಹೇಳುವುದು ವಿಚಾರಪ್ರದವಾಗಿರಲಿ, ವಿನೋದಪ್ರದವಾಗಿರಲಿ ಕೇಳುವವರೇ ಅತ್ಯುತ್ತಮ ತೀರ್ಪುಗಾರರೆಂದು ಆತ ತಿಳಿದಿರುತ್ತಾನೆ.

ನಿಗರ್ವಿಯಾದವನು ಕೇಳುವವರ ಅವಿಶ್ವಾಸಕ್ಕೆ ಪಾತ್ರ ನಾಗುವುದು ಅತ್ಯಪೂರ್ವ. ತನ್ನನ್ನು ತಾನೆ ಮೆಚ್ಚಿಕೊಳ್ಳದವನನ್ನು ಕಂಡರೆ ಯಾರಿಗೂ ಅಸೂಯೆಯಿಲ್ಲ.

ನಮ್ಮ ವಿಷಯವಾಗಿ ನಾವು ತೀರ ಕಡಿಮೆಯಾಗಿ ಮಾತ ನಾಡಬೇಕು. ನಿಜವಾಗಿ ನೋಡಿದರೆ ನಮ್ಮದನ್ನು ನಾವು ಏನು ತಾನೆ ಹೇಳಿಕೊಳ್ಳಬಹುದು? ನಮ್ಮ ಲೋಪದೋಷಗಳನ್ನು ನಾವೆ ತೋಡಿಕೊಳ್ಳುವುದು ಎಷ್ಟು ಅವಿವೇಕವೋ ನಮ್ಮಲ್ಲಿ ಇರ

ಬಹುದೆಂದು ಭಾವಿಸಿಕೊಂಡ ಸುಗುಣಗಳನ್ನು ಹೇಳಿಕೊಳ್ಳು ವುದೂ ಅಷ್ಟೇ ಹಾಸ್ಯಾಸ್ಪದ. ನಮ್ಮ ಸ್ವಕೀಯದ ಹಾಗೂ ಗೃಹ ಕೃತ್ಯದ ವಿಷಯಗಳನ್ನು ಸಂಭಾಷಣೆಗಳಲ್ಲಿ ತರುವುದು ಕಡಿಮೆಯ ಅನೌಚಿತ್ಯವೇನಲ್ಲ. ನಿಮ್ಮ ಲಾಯದಲ್ಲಿ ಎಷ್ಟು ಕುದುರೆ ಇದ್ದರೆ ಏನು ಬಂತು ಭಾಗ್ಯ ಕೇಳುವವರಿಗೆ? ಅಥವಾ ನಿಮ್ಮ ಮನೆಯ ಜವಾನ ದಗಲುಬಾಜಿಯೋ ಮಡ್ಡಿಯೋ ಅದನ್ನು ಕಟ್ಟಿಕೊಂಡು ನಮಗೇನು?

ಇನ್ನೊಬ್ಬರು ಬಾಯಿ ತೆರೆಯುವುದಕ್ಕೆ ಅವಕಾಶವಿಲ್ಲದ ಹಾಗೆ ನೀವೇ ಮಾತನಾಡುವುದೂ ಬಿಗುಮಾನದ ಸೋಗಿನಲ್ಲಿ ಮಾತನಾಡದೆ ಬಿಮ್ಮನಿರುವುದೂ ಜೊತೆಯವರಿಗೆ ಅವಹೇಳನ ಮಾಡಿದಂತೆಯೇ ಸರಿ.

ಕತೆ ಹೇಳುವುದಾದರೆ ಹೇಳುವುದಕ್ಕೆ ಮುಂಚೆ ಕತೆಯ ಮುಖ್ಯ ವ್ಯಕ್ತಿಗಳ ಬಗ್ಗೆ ಕೇಳುವವರಿಗೆ ಸಹಜ ಕಲ್ಪನೆ ಬರು ವಂತೆ ಪರಿಚಯಾತ್ಮಕವಾಗಿ ನಾಲ್ಕು ಮಾತು ಹೇಳುವುದು ಸಾಮಾನ್ಯವಾಗಿ ತಪ್ಪಾಗಲಾರದು. ಹಾಗಾಯಿತು ಹೀಗಾಯಿತು ಎಂದು ಹೇಳುವುದರಲ್ಲಿ ಇರುವ ಸ್ವಾರಸ್ಯಕ್ಕಿಂತ ಇಂಥ ಮನುಷ್ಯ ಹೀಗೆ ಮಾಡಿದ, ಇಂಥ ಸಂದರ್ಭದಲ್ಲಿ ಹೀಗಾಯಿತು ಎಂದು ಹೇಳುವುದರಲ್ಲಿಯೇ ಹೆಚ್ಚು ಸ್ವಾರಸ್ಯವಿದೆ.

ತರುಣರಿಗೆ ತಮ್ಮ ವಯೋಧರ್ಮಾನುಸಾರವಾದ ಸಾವಿರ ಅನುಕೂಲಗಳಿದ್ದರೂ ಚೆನ್ನಾಗಿ ಮಾತನಾಡುವವರು ಅವರಲ್ಲಿ ಹಲವರಿಲ್ಲ. ಮಾತಿನ ಹಿಂದೆ ಅನುಭವ ಇಲ್ಲದೆ ಮಾತು ದುರ ಹಂಕಾರದ ರೀತಿಯಲ್ಲಿ ಬೆಳೆಯುತ್ತದೆ. ಹೀಗಾಗಿ ಅವರ ಮಾತಿ ನಲ್ಲಿ ಇನ್ನೊಬ್ಬರಿಗೆ ಹಿತವಾಗುವ ಉದ್ದೇಶಕ್ಕಿಂತ ತಮಗೆ ಹಿತ ವಾಗುವ ಉದ್ದೇಶವೇ ಹೆಚ್ಚಾಗಿರುತ್ತದೆ.

ಯಾವ ವಿಷಯವು ಹುಡುಗರ ಬಾಯಲ್ಲಿ ಹಾಸ್ಯಾಸ್ಪದವಾಗಿ ತೋರುವುದೋ ಅದೇ ವಿಷಯವು ವೃದ್ಧರ ಬಾಯಲ್ಲಿ ಯೋಗ್ಯವಾಗಿ ಕಾಣಬರುವುದು ಖಂಡಿತ.

ತಲೆಗೆಲ್ಲ ಒಂದೇ ಮಂತ್ರವೆಂಬಂತೆ ಮಾತುಮಾತಿಗೆ ಅದೇ ಗಾದೆ ಅದೇ ಟೀಕೆಗಳನ್ನು ಉದಾಹರಿಸುವ ಟೊಳ್ಳು ಬಡಾಯಿಗಳನ್ನು ಸಹಿಸುವುದಂತೂ ತಿಳಿದವರಿಗೆ ದುಸ್ಸಾಧ್ಯವಾಗುತ್ತದೆ. ಪಾಂಡಿತ್ಯದ ಸೋಗು ಜೇರಿ ಇರುವುದರಿಂದ ಇಂತಹ ಮೂರ್ಖರು ತೀರ ಅಸಹನೀಯರಾಗುತ್ತಾರೆ.

ವಿವೇಕಿಯಾದವನು ಯಾವ ಶಾಸ್ತ್ರದಲ್ಲಿ ತನಗೆ ಅದ್ವಿತೀಯವಾದ ಪಾಂಡಿತ್ಯವಿರುತ್ತದೆಯೋ ಯಾವುದರಿಂದ ತಾನು ಪ್ರಸಿದ್ಧಿಗೆ ಬಂದಿರುವನೋ ಅಂತಹ ವಿಷಯವನ್ನು ಕುರಿತು ಮಾತನಾಡುವ ಪ್ರಸಂಗವನ್ನು ಸಾಧ್ಯವಾದಷ್ಟು ದೂರಮಾಡುತ್ತಾನೆ. ಕೌಲಿಯ ಆಪ್ತಸ್ನೇಹಿತರ ವಿನಾ ಉಳಿದವರು ಯಾರಿಗೂ ಆತನ ಮಾತುಕತೆಗಳಿಂದ ಆತ ಎಂತಹ ಮಹಾಕವಿಯೆನ್ನುವುದು ಪತ್ತೆಯಾಗಲಿಲ್ಲವಂತೆ! ಇದಕ್ಕಿಂತಲೂ ಮನೋಹರವಾದ ಸಂಗತಿ ಬಹುಶಃ ಕೌಲಿಯ ಜೀವಮಾನದಲ್ಲಿಯೇ ಬೇರೆ ಸಿಗಲಾರದು ಇಂತಹದೊಂದು ಸೂತ್ರವು ಶಿಷ್ಟಸಂಪ್ರದಾಯವಾಗಿರುವುದು ಮಾತ್ರವಲ್ಲದೆ ವಿವೇಕಪೂರ್ಣವಾದ ತಂತ್ರವೂ ಆಗಿದೆ. ತಾನು ಯಾವುದರಿಂದ ಪ್ರಸಿದ್ಧಿಗೆ ಬಂದಿದಾನೆಯೋ ಆ ವಿಷಯವನ್ನೇ ಕುರಿತು ಮಾತನಾಡುವವನಿಗೆ ಲಾಭ ಸಾಸಿವೆಯಷ್ಟಾದರೆ ನಷ್ಟ ಸಾಗರದಷ್ಟು. ಯಾವ ವಿಷಯವನ್ನು ಕುರಿತು ತಾನು ಮಾತನಾಡಿದರೇ 'ಈತ ಚೆನ್ನಾಗಿ ಮಾತನಾಡುತ್ತಾನೆ' ಎಂದು ಎಲ್ಲರೂ ಅಭಿಪ್ರಾಯಪಡುತ್ತಾರೆಯೊ ಅಂತಹ ವಿಷಯಗಳ ಬಗ್ಗೆ ಒಮ್ಮೊಮ್ಮೆ ಮೌನವಾಗಿರುವವನು ತನಗೆ ಗೊತ್ತಿಲ್ಲದೆ ಇರ

ಬಹುದಾದ ಇತರ ವಿಷಯಗಳಲ್ಲಿಯೂ 'ಈತ ಪ್ರಾಜ್ಞನಾಗಿರ ಬಹುದು' ಎಂಬ ಜನಾಭಿಪ್ರಾಯವನ್ನು ಗಳಿಸುವುದು ಸಾಧ್ಯ ವಿದೆ ಎಂದು ಹೇಳಬಹುದು.

ತರ್ಕ ಚರ್ಚೆ ಎಂದರೆ ಹೆಂಗಸರು ದಿಗಿಲು ಬೀಳುತ್ತಾರೆ. ತರ್ಕಬದ್ಧವಾಗಿ ಪ್ರತಿಪಾದನೆಮಾಡುವ ಬದಲು ಸಮಯೋಚಿತ ವಾಗಿ ಮಾತು ತಿರುಗಿಸಿದರೆ ಅಥವಾ ಸರಸವಾಗಿ ಮಾತು ಸೇರಿ ಸಿದರೆ ಅವರು ಸುಲಭವಾಗಿ ಒಪ್ಪಿಕೊಳ್ಳುತ್ತಾರೆ.

ಹೊಗಳುಭಟ್ಟರ ಮುಖಸ್ತುತಿ ಯಾವುದು, ಮೂರ್ಖರ ಪ್ರಶಂಸೆ ಯಾವುದು, ವಿಚಾರಜ್ಞರ ಮೆಚ್ಚಿಗೆ ಯಾವುದು, ಎನ್ನು ವುದನ್ನು ತಿಳಿಯುವವರು ; ಕೊಂಡಾಡಬೇಕಾದ ವಿಷಯಗಳನ್ನು ಸಕಾರಣವಾಗಿ ಕೊಂಡಾಡಬೇಕು.

ನೆರೆದವರೆಲ್ಲರಿಗೂ ಸಂತೋಷವಾಗದಿದ್ದರೆ ಕುಚೋದ್ಯ ಮಾಡುವುದು ಉಪಯೋಗವಿಲ್ಲ. ಏಕೆಂದರೆ ಕುಚೋದ್ಯಕ್ಕೆ ಗುರಿ ಯಾದವನು ವಿನಾ ಉಳಿದವರು ಯಾರಿಗೂ ನಿಮ್ಮಮಾತು ಅರ್ಥವಾಗುವುದಿಲ್ಲ.

ಉಲ್ಲಾಸದ ಮನೋಭಾವ, ವಿವೇಕ, ವಿವೇಚನೆಗಳಿಂದ ಮಾತುಗಾರಿಕೆ ರಂಜನೆಯಾಗದಿರುವುದು ಅಪೂರ್ವ. ಆದರೂ ಸಮಕಾಲೀನ ವಿಷಯಗಳನ್ನು ಕುರಿತು ಪೂರ್ವಭಾವಿಯಾಗಿ ವಿಚಾರಮಾಡಿ ನೆರೆಹೊರೆಯವರಿಗಿಂತ ಹೆಚ್ಚಿನ ಸಂಗತಿಗಳನ್ನು ತಿಳಿದುಕೊಂಡು ಸಂಭಾಷಣೆಯ ಪೂರ್ವಸಿದ್ಧತೆಯನ್ನು ನಡಸು ವುದು ಅಷ್ಟೇನೂ ಕೆಟ್ಟಪದ್ಧತಿಯಾಗಲಾರದು. ನಮ್ಮ ಸೈನಿಕರು ಹೊರದೇಶದಲ್ಲಿ ಬಹು ಮುಖ್ಯವಾದ ಸ್ಥಾನವೊಂದನ್ನು ಆಕ್ರ ಮಿಸುವುದಾದರೂ ನಮ್ಮ ಪ್ರಜಾಪ್ರತಿನಿಧಿ ಸದಸ್ಯರು ಸಭೆಯಲ್ಲಿ ಅತಿ ಮುಖ್ಯವಾದ ಒಂದು ಮಸೂದೆಯನ್ನು ಚರ್ಚೆಗೆ ತರುವು

ದಾದರೂ ಮೊದಲನೆಯದರ ಬಲಾಬಲ, ಸ್ಥಳಮಾಹಿತಿ, ಐತಿಹ್ಯ ಮುಂತಾದುವುಗಳನ್ನೂ ಎರಡನೆಯದರ ಪಕ್ಷಪ್ರತಿಪಕ್ಷದ ಖಂಡನ ಮಂಡನಗಳನ್ನೂ ಚೆನ್ನಾಗಿ ಅರಿತುಕೊಂಡು ವಾದಮಾಡಿದ್ದಾದರೆ, ನಿಮ್ಮ ವಾದವನ್ನು ಸಂತೋಷದಿಂದ ಕೇಳದವರು ವಿರಳ. ಇದರಂತೆಯೇ ಯಾವನೊಬ್ಬನು ಮಾತನಾಡಿದರೂ ಮಾತು ಸಮಗ್ರವಾಗಿದ್ದರೆ ಜನಸಾಮಾನ್ಯರಿಗೆ ಸೊಗಸಾಗಿದ್ದರೂ ಬುದ್ಧಿವಂತರಿಗೆ ಸೊಗಸಾಗಿ ತೋರುವ ಎಷ್ಟೋ ವಿಷಯಗಳು ಹೊರಬರುತ್ತವೆ. ಅಲ್ಪವೆಂದು ನಾವು ತಿಳಿಯುವ ಎಷ್ಟೊ ಅಂಶಗಳು ಬುದ್ಧಿವಂತರಿಗೆ ಮಹತ್ವಪೂರ್ಣವಾಗಿರುತ್ತವೆ. ಇಂತಹ ಪೂರ್ವಸಿದ್ಧತೆಯಿಂದ ಆಗಬಹುದಾದ ಒಂದೇ ಒಂದು ಪ್ರಮಾದದ ಭೀತಿ ನನಗಿದೆ. ಸಮಗ್ರ ವಿಷಯದ ಪೂರ್ವಸಿದ್ಧತೆಯಿಂದ ತಲೆಭಾರವಾಗಿ ಬಂದವನು, ಸಂದರ್ಭ ಬರಲಿ ಬರದಿರಲಿ; ತನ್ನ ತಲೆಭಾರವನ್ನು ಇಳಿಸಿಕೊಳ್ಳುವುದಕ್ಕೆ ಎಲ್ಲಿ ಚಡಪಡಗುಟ್ಟುವನೋ ಎನ್ನುವ ದಿಗಿಲು ನನಗಿದೆ.

ಮಾತಿನಲ್ಲಿ ಮಧ್ಯೆ ಮಧ್ಯೆ ಪ್ರಶ್ನೆ ಕೇಳುವುದು ಒಂದು ರೀತಿಯಲ್ಲಿ ನಿಗರ್ವಿತನದ ಮತ್ತು ವಿಚಾರಾಸಕ್ತಿಯ ಗಾಂಭೀರ್ಯದ ಸೋಗಾದರೂ ತನಗೆ ತೋರಿದ ಸಂದೇಹಗಳು ಉಳಿದವರಿಗೆ ತೋರದೆ ಇರುವಾಗ ಇಂತಹ ಪ್ರಶ್ನೆಗಳ ಸುರಿಮಳೆ ಅಷ್ಟಾಗಿ ಹಿತವೆನಿಸುವುದಿಲ್ಲ. ಮೇಲಾಗಿ, ಪ್ರಶ್ನೆ ಕೇಳುವವನು ಉತ್ತರ ಕೊಡುವವನ ಅನುಗ್ರಹ ಯಾಚಕನಾಗಿರುತ್ತಾನೆ ಎಂಬುದನ್ನು ಮರೆಯಬಾರದು.

'ನಾವು ನಿರ್ದಾಕ್ಷಿಣ್ಯವಾಗಿ ಮಾತನಾಡುತ್ತೇವೆ' ಎಂದು ಹೇಳುವವರ ಹಿಗ್ಗಿಗಿಂತ ಶೋಚನೀಯವಾದುದು ಬೇರೆ ಇಲ್ಲ. ಎಂತಹ ನಿಷ್ಠುರವಾದ ಮಾತನ್ನಾಗಲೀ ಇವರು ಆಡಿ ಬಿಡುತ್ತಾರೆ.

ಸ್ವಲ್ಪ ದಾಕ್ಷಿಣ್ಯದವರಾದರೆ ತನ್ನ ಸ್ನೇಹಿತರನ್ನೋ ತನ್ನನ್ನೋ ಉಳಿಸಿಕೊಳ್ಳಬಹುದು.

ಇನ್ನೊಬ್ಬರ ಮನೋಭಾವಗಳನ್ನು ತನ್ನ ಕಡೆಗೆ ತಿರುಗಿಸಿಕೊಳ್ಳುವುದರಲ್ಲಿ ಹೇಗೋ ಹಾಗೆ ತನ್ನ ಮನೋಭಾವಗಳನ್ನು ಇನ್ನೊಬ್ಬರಿಗೆ ಅನುಗುಣವಾಗುವಂತೆ ತಿರುಗಿಸಿಕೊಳ್ಳುವುದರಲ್ಲಿಯೂ ಸಂತೋಷ ಹೊಂದುವುದು ಮನುಷ್ಯನಿಗೆ ಕಷ್ಟವೇನಲ್ಲ. ಶ್ರೇಷ್ಠವಾದ ಪ್ರತಿಭಾವಂತನಿಗೆ ಯಾವ ಬಣ್ಣವೂ ಒಪ್ಪುತ್ತದೆ. ಯಾವ ತೊಡವೂ ಅಲಂಕಾರವಾಗುತ್ತದೆ.

ಇಲ್ಲಿ ಹೇಳಿರುವ ಅಂಶಗಳಲ್ಲದೆ ಕೇವಲ ಶಿಷ್ಟಸಮುದಾಯದಲ್ಲಿ ಬೆರೆತು ಕಲಿಯಬೇಕಾದ ಇನ್ನೂ ಎಷ್ಟೋ ಅಂಶಗಳಿವೆ ಎಂಬುದನ್ನು ಮಾತ್ರ ಒತ್ತಿ ಹೇಳಬಯಸುತ್ತೇನೆ. ಮನುಷ್ಯನ ಸದ್ಗುಣ ದುರ್ಗುಣಗಳೆರಡೂ ಆಕರ್ಷಕಗಳೇ. ಇವುಗಳ ಜೊತೆಗೆ ನೀವೇ ನೋಡಿ ತಿಳಿದಂಥವುಗಳಿಂದ ಯಾವ ಕಾರಣದಿಂದಾಗಿ ಆತ ಗೌರವಾರ್ಹನಾಗಿದಾನೆ ಎನ್ನುವುದನ್ನೂ ಈತ ಅಸಹನೀಯನಾಗಿದ್ದಾನೆ ಎನ್ನುವುದನ್ನೂ ಸುಲಭವಾಗಿ ಗ್ರಹಿಸಬಹುದು.

---

# ಜೋಸೆಫ್ ಅಡಿಸನ್

## ಪಕ್ಷಮನೋಭಾವದ ದುಷ್ಪರಿಣಾಮ

೧

ಪಕ್ಷಮನೋಭಾವದ ದುಷ್ಪರಿಣಾಮಗಳನ್ನು ಕುರಿತು ನಾವು ಮಾತನಾಡುವಾಗಲೆಲ್ಲ ನನ್ನ ಮಾನ್ಯ ಮಿತ್ರನಾದ ರೋಜರ್ ಮಹಾಶಯನು ತಾನು ಶಾಲೆಗೆ ಹೋಗುವ ಹುಡುಗನಾಗಿದ್ದಾಗ ತನ್ನ ಅನುಭವಕ್ಕೆ ಬಂದ ಸಂಗತಿಯೊಂದನ್ನು ಮೇಲಿಂದ ಮೇಲೆ ಹೇಳುವುದುಂಟು. ಪಾರ್ಲಿಮೆಂಟ್ ಪಕ್ಷದವರಿಗೂ ಪ್ರಭು ಪಕ್ಷದವರಿಗೂ ಹಗೆತನ ಹೊತ್ತಿ ಉರಿಯುತ್ತಿದ್ದ ಕಾಲ ಅದು. ಆ ಕಾಲಕ್ಕೆ ಕೇವಲ ಹುಡುಗನಾಗಿದ್ದ ಈ ನಮ್ಮ ಶ್ರೀಮಂತ ವೀರ 'ಸಂತ ಆ್ಯನಳ ಓಣಿ'ಗೆ ದಾರಿ ಕೇಳುವ ಪ್ರಸಂಗ ಬಂದಾಗ ಈತ ಮಾತನಾಡಿಸಿದವನು ಪ್ರಶ್ನೆಗೆ ತಕ್ಕ ಉತ್ತರ ಕೊಡುವ ಬದಲು ಇವನನ್ನೆ 'ಕ್ಯಾಥೋಲಿಕ್ ನಾಯಿಕುನ್ನಿ' ಎಂದು ಕರೆದು ಆ್ಯನಳನ್ನು ಸಂತಳನ್ನಾಗಿ ಮಾಡಿದವರು ಯಾರೆಂದು ಛೀಮಾರಿ ಮಾಡಿದನಂತೆ. ಹುಡುಗ ಕಕಮಕ ಹಿಡಿದು ಎದುರಿಗೆ ಸಿಕ್ಕ ಇನ್ನೊಬ್ಬನನ್ನು 'ಆ್ಯನಳ ಓಣಿ'ಗೆ ದಾರಿ ಕೇಳಿದರೆ ಈತನ ಕಷ್ಟಗಳಿಗೆ ಪ್ರತಿಫಳವಾಗಿ 'ಬೋಳುದಲೆ ನಾಯಿಕುನ್ನಿ' ಎಂದು ಬೈದು, 'ನೀನು ಹುಟ್ಟುವ ಮೊದಲೇ ಆಕೆ ಸಂತಳಾಗಿದ್ದಳು; ನಿನ್ನನ್ನು ನೇಣು ಹಾಕಿದ ಮೇಲೂ ಆಕೆ ಸಂತಳಾಗಿಯೇ ಉಳಿಯುತ್ತಾಳೆ, ಎಂದು ಗದರಿಸಿ ಹೋದನಂತೆ. ಇಷ್ಟಾದ ಮೇಲೆ ಮತ್ತೆ ಇದೇ ಪ್ರಶ್ನೆ ಕೇಳುವುದು ಉಚಿತವಲ್ಲವೆಂದು ಬಗೆದು ಅಕ್ಕಪಕ್ಕದ ಪ್ರತಿಯೊಂದು ಓಣಿಯನ್ನೂ

ಹೊಕ್ಕು ಬಳಸಿ ಆ ಓಣಿಯ ಹೆಸರು ಯಾವುದೆಂದು ಕೇಳುತ್ತಾ ಹೋದೆ, ಎಂದು ರೋಜರ್ ಹೇಳುವುದುಂಟು. ಇಂತಹ ಒಂದು ಚಮತ್ಕಾರವಾದ ಉಪಾಯದಿಂದ ಯಾವ ಪಕ್ಷದವರಿಗೂ ಅಪಚಾರವಾಗದ ಹಾಗೆ ರೋಜರ್ ತನಗೆ ಬೇಕಾದ ಓಣಿಯನ್ನು ಪತ್ತೆ ಮಾಡಿದನಂತೆ. ಈ ಬಗೆಯ ಪಕ್ಷಮನೋಭಾವದಿಂದ ಒಳ್ಳೆಯ ನೆರೆಹೊರೆ ಹೇಗೆ ಕೆಡುತ್ತದೆ; ಪ್ರಾಮಾಣಿಕರಾದವರು ಹೇಗೆ ಒಬ್ಬರಿಗೊಬ್ಬರು ಹಗೆಗಳಾಗುತ್ತಾರೆ; ಮೇಲಾಗಿ ಭೂಕಂದಾಯವನ್ನು ವಿಧಿಸುವಲ್ಲಿಯೂ ಮೃಗಯಾವಿನೋದಾದಿ ಕ್ರೀಡೆಗಳಿಗೆ ಅಡ್ಡಿ ತರುವುದರಲ್ಲಿಯೂ ಹೇಗೆ ದುರಭಿಪ್ರಾಯವು ತಲೆತೋರುತ್ತದೆ ಎಂದು ಮುಂತಾಗಿ ವಿಚಾರಮಾಡುತ್ತ ರೋಜರ್ ತನ್ನ ಈ ಕಥನವನ್ನು ಮುಗಿಸುವುದು ಪದ್ಧತಿ.

ಒಂದು ದೇಶದಲ್ಲಿ ಅದರ ಆಡಳಿತ ವರ್ಗವನ್ನು ಎರಡು ಪಂಗಡಗಳನ್ನಾಗಿ ಒಡೆದು ಆ ಎರಡು ಪಂಗಡಗಳವರೂ ತಾವು ನಿಜವಾಗಿಯೂ ಬೇರೆ ಬೇರೆ ಜನಾಂಗಗಳೇ ಆಗಿದ್ದರೆ ನಡೆದುಕೊಳ್ಳುತ್ತಿದ್ದುದಕ್ಕಿಂತ ಮಿಗಿಲಾಗಿ ಒಬ್ಬರಿಗೊಬ್ಬರು ಹೆಚ್ಚು ಹೆಚ್ಚು ಪರಕೀಯರಾಗಿಯೂ, ವಿದ್ವೇಷಿಗಳಾಗಿಯೂ ನಡೆದುಕೊಳ್ಳುವಂತೆ ಮಾಡುವ ಇಂತಹ ಘೋರವಾದ ವಿಭಜನೆಯು ತತ್ವಕ್ಕಿಂತ ಮಹತ್ತರವಾದ ದೈವಶಿಕ್ಷೆ ಬೇರೆ ಯಾವುದೂ ಇರಲಾರದು. ನಮ್ಮ ಶತ್ರುವಿಗೆ ಅನುಕೂಲವಾಗುತ್ತದೆ ಎನ್ನುವ ದೃಷ್ಟಿಯಿಂದ ಮಾತ್ರವಲ್ಲದೆ ಸಾಮಾನ್ಯವಾಗಿ ಪ್ರತಿಯೊಬ್ಬ ವ್ಯಕ್ತಿಯ ಧಾರ್ಮಿಕ ಜೀವನವನ್ನೂ ಕೆಡಿಸುತ್ತದೆ. ಎನ್ನುವ ದೃಷ್ಟಿಯಿಂದಲೂ ಇಂತಹ ವಿಭಜನೆಯ ಪ್ರಯೋಗಗಳು ತೀರ ವಿನಾಶಕಾರಕಗಳಾಗಿ ಪರಿಣಮಿಸುತ್ತವೆ. ಇವರ ಪ್ರಭಾವದಿಂದ ಮಾನವನ ನೀತಿ ನಿಯಮಗಳೂ ಮನೋಬುದ್ಧಿಗಳೂ ಹಾಳಾಗಿ

ಹೋಗುವುದಲ್ಲದೆ ರಾಷ್ಟ್ರದ ಘನತೆ ಗೌರವಗಳೇ ಅಳಿಸಿ ಹೋಗುತ್ತವೆ. ಮಾತ್ರವಲ್ಲ, ಮಾನವನ ಸರ್ವಸಾಮಾನ್ಯವಾದ ವ್ಯವಹಾರಜ್ಞಾನಕ್ಕೇ ಅಪೋಹ ಬರುತ್ತದೆ.

ರೋಷಾವೇಶದಿಂದ ಕೂಡಿದ ಪಕ್ಷಮನೋಭಾವವು ರೂಕ್ಷವಾಗಿ ಕೆರಳಿದಾಗ, ಅಂತರ್ಯುದ್ಧದಲ್ಲಿಯೂ ರಕ್ತಪಾತದಲ್ಲಿಯೂ ಪರ್ಯವಸಾನಗೊಳ್ಳುತ್ತದೆ. ಅದೇ ಮನೋಭಾವವು ಬಲವಾದ ಹಿಡಿತದಲ್ಲಿದ್ದಾಗ ಸಹಜವಾಗಿ ಸುಳ್ಳು, ಅಪವಾದ, ಚಾಡಿ ಛಿದ್ರಗಳಲ್ಲಿಯೂ, ಏಕಪಕ್ಷೀಯವಾದ ನ್ಯಾಯನಿರ್ವಹಣೆಗಳಲ್ಲಿಯೂ ತಲೆದೋರುತ್ತದೆ. ಒಟ್ಟಿನಲ್ಲಿ ದೇಶದ ತುಂಬ ಹಗೆತನವೂ, ಅಸೂಯೆಯೂ ತುಂಬಿಹೋಗಿ ಸೌಜನ್ಯ, ಸೌಹಾರ್ದ, ಸಹಾನುಭೂತಿಗಳು ನಾಮಾವಶೇಷವಾಗುತ್ತವೆ.

ತನ್ನ ಶತ್ರುವನ್ನು ದ್ವೇಷಿಸುವ ಅವಕಾಶ ಕೂಡ ಮಾನವನಿಗೆ ಇರಕೂಡದು, ಎಂದು ಪ್ಲೂಟಾರ್ಕ್ ಬಹಳ ಚೆನ್ನಾಗಿ ಹೇಳಿದ್ದಾನೆ. ಏಕೆಂದರೆ ಸಂದರ್ಭವಶದಿಂದ ನೀವು ಮನೋವಿಕಾರಗಳಿಗೆ ಒಳಗಾದರೆ ಕಾಲಕ್ರಮೇಣ ಅದು ತಾನಾಗಿಯೇ ಉಳಿದವರ ವಿಷಯದಲ್ಲಿಯೂ ಗೋಚರವಾಗುತ್ತದೆ. ನೀವು ನಿಮ್ಮ ಶತ್ರುಗಳನ್ನು, ದ್ವೇಷಿಸಿದರೆ ಕ್ರಮೇಣ ನಿಮ್ಮ ಮಿತ್ರರ ಮೇಲೆಯೂ ತಟಸ್ಥರ ಮೇಲೆಯೂ ತಿರುಗಿ ಬೀಳುವ ದುಷ್ಪ್ರವೃತ್ತಿಗೆ ನೀವು ಈಡಾಗುತ್ತೀರಿ. ಈ ತತ್ವಜ್ಞಾನಿಯು ಬರೆಯುವುದಕ್ಕೆ ಸುಮಾರು ನೂರು ವರ್ಷಗಳ ಹಿಂದೆಯೇ ಪ್ರಪಂಚಕ್ಕೆ ದೊರೆತ ಮಹಾಮಹಿಮನ ದಿವ್ಯಸಂದೇಶದೊಡನೆ ಈ ನೀತಿಬೋಧೆ ಎಷ್ಟು ಸಮಂಜಸವಾಗಿ ಹೊಂದಿಕೊಳ್ಳುತ್ತದೆ, ಎನ್ನುವುದನ್ನು ಇಲ್ಲಿ ನಾನು ವಿಚಾರಿಸಬಹುದು. ಆದರೆ ಆದರ ಬದಲು ಯಾವ ತೆರನಾದ ಧಾರ್ಮಿಕ ದೃಷ್ಟಿಗಾಗಲಿ, ವಿಚಾರಬುದ್ಧಿಗಾಗಲಿ ಹೊಂದಿ

ಕೆಯಾಗದ ಅಸಂಬದ್ಧವಾದ ರೀತಿಯಲ್ಲಿ ನಮ್ಮ ಒಳ್ಳೆಯವರನೇಕರ ಮನಸ್ಸು ಪಕ್ಷಮನೋಭಾವದಿಂದ ಹುಳಿಗಟ್ಟಿ ಪರಸ್ಪರ ವೈಮನಸ್ಸಿಗೆ ಕಾರಣವಾಗಿರುವ ಅಂಶವನ್ನು ಮಾತ್ರ ವಿಶೇಷ ದುಃಖದಿಂದ ನೆನೆಯುತ್ತಿದ್ದೇನೆ. ತಮ್ಮ ತಮ್ಮ ವೈಯಕ್ತಿಕ ಅನುಕೂಲಗಳಷ್ಟರಲ್ಲಿಯೆ ಆಸಕ್ತರಾಗಿದ್ದರೆ ಯಾರು ಯಾರು ರಾಗದ್ವೇಷಾದಿಗಳಿಗೆ ವಶರಾಗುತ್ತಿರಲಿಲ್ಲವೊ ಆ ಆ ಸಜ್ಜನರೆಲ್ಲ ಈಗ ಸಾರ್ವಜನಿಕಸೇವೆಯ ಹೆಸರಿನಲ್ಲಿ ವಿಕಾರಪರವಶರಾಗುತ್ತಿರುವುದು ಸಹಜವಾಗಿದೆ. ಹೀಗೆ ನಮ್ಮ ನೀತಿಗೇ ಭಂಗತರುವ ಈ ಪಕ್ಷಮನೋಭಾವ ನಮ್ಮ ವಿಮರ್ಶನಬುದ್ಧಿಗೂ ವಿಪತ್ಕಾರಕವಾಗಿದೆ. ಬರಹಗಾರನ ಪ್ರತಿಪಕ್ಷದವರು ಕೆಲಸಕ್ಕೆ ಬಾರದ ಪೊಳ್ಳು ಬರವಣಿಗೆಯನ್ನು ಅಮೂಲ್ಯವಾದುದೆಂದೂ ಅಮೂಲ್ಯವಾದುದನ್ನು ಜಳ್ಳೆಂದೂ ಕೂಗಾಡುವುದನ್ನು ನಾವು ಆಗಾಗ ಕೇಳುತ್ತಿದ್ದೇವೆ. ಇಂತಹ ಮನೋಭಾವದಿಂದ ಪ್ರಚೋದಿತನಾದವನು ನಿಜವಾದ ಅಂದಚೆಂದವನ್ನಾಗಲಿ ಕುಂದುಕೊರತೆಗಳನ್ನಾಗಲಿ ಸೂಕ್ಷ್ಮವಾಗಿ ಪರಿಶೀಲಿಸಲು ಅಸಮರ್ಥನಾಗುತ್ತಾನೆ. ವಸ್ತುತಃ ಎಷ್ಟೇ ನೇರವೂ, ಪರಿಪೂರ್ಣವೂ ಆದ ಪದಾರ್ಥವಾದರೂ ಬೇರೆ ಬೇರೆ ವಾಹಕದ್ರವಗಳಲ್ಲಿ ನೋಡಿದಾಗ ವಕ್ರವೂ, ಅಸಮಗ್ರವೂ ಆಗಿ ಕಾಣುವಂತೆ ಎಂತಹ ಪ್ರತಿಷ್ಠಿತ ವ್ಯಕ್ತಿಯಾದರೂ ಬೇರೆಬೇರೆ ಪಕ್ಷಗಳನ್ನು ಹಿಡಿದಾಗ ವಿಪರೀತವಾಗಿ ಕಾಣುತ್ತಾನೆ. ಈ ಕಾರಣದಿಂದಾಗಿ ಇಂಗ್ಲೆಂಡಿನಲ್ಲಿ ಬೆಳಕು ಕತ್ತಲೆಗಳಷ್ಟು ಪರಸ್ಪರ ವಿರುದ್ಧವಾಗಿರುವ ಎರಡು ಭಿನ್ನ ಭಿನ್ನ ವ್ಯಕ್ತಿತ್ವವನ್ನು ತಾಳಿದಂತಹ ಪ್ರತಿಷ್ಠಿತ ಮಾನವನೇ ಅಪೂರ್ವವಾಗಿದಾನೆ. ಈಗ ಸದ್ಯಕ್ಕೆ ಬ್ರಿಟಿಷ್ ಜನಾಂಗದ ಎಲ್ಲ ವರ್ಗದ ಎಲ್ಲ ಹಂತಗಳಲ್ಲಿಯೂ ಕಾಣಬರುವ ಈ ವಿಚಿತ್ರವಾದ ಪಕ್ಷ

ವಿಶ್ವಾಸದಿಂದ ಪಾಂಡಿತ್ಯ, ಶಾಸ್ತ್ರ ಸಾಹಿತ್ಯಾದಿಗಳೂ ಒಂದು ರೀತಿಯಲ್ಲಿ ಕುಂದರಿಗೀಡಾಗಿವೆ. ತಮ್ಮ ವ್ಯಕ್ತಿಮಹಿಮೆಯಿಂದಲೂ, ವಿದ್ಯಾರ್ಜನೆಯಿಂದಲೂ ಹಿಂದೆ ಸುಶಿಕ್ಷಿತ ಸಮಾಜದಲ್ಲಿ ಜನರು ಪ್ರಖ್ಯಾತರಾಗುತ್ತಿದ್ದಂತೆ ಈಗ ತಮ್ಮ ತಮ್ಮ ಪಕ್ಷಗಳ ಸಮರ್ಥನೆಯಲ್ಲಿ ತೋರಿಸುವ ತೀವ್ರವಾದ ಘರ್ಷಣೆಗಳ ದೆಸೆಯಿಂದಲೇ ಪ್ರಖ್ಯಾತರಾಗುತ್ತಿದ್ದಾರೆ. ಪುಸ್ತಕಗಳನ್ನು ಕೂಡ ಇದೇ ರೀತಿಯಲ್ಲಿ ವಿಮರ್ಶಿಸುತ್ತಾರೆ. ಅವಾಚ್ಯವಾದ ಅಶ್ಲೀಲ ಶೈಲಿಯನ್ನು ಸೊಗಸಾದ ವಿಡಂಬನೆಯೆಂದೂ ಪಕ್ಷಮನೋಭಾವದ ಮಂದ ಬರವಣಿಗೆಯನ್ನು ಉತ್ತಮವಾದ ಬರವಣಿಗೆಯೆಂದೂ ಹೇಳುತ್ತಾರೆ.

ಯಾವ ಪಕ್ಷಕ್ಕೂ ಸೇರದವರ ವಿಷಯದಲ್ಲಿ ಕರ್ಣಾಕರ್ಣಿಕೆಯಾಗಿ ಕೇಳಿದ ಅಥವಾ ತಾವೇ ಹುಟ್ಟಿಸಿ ಹೇಳಿದ ಅವಮಾನಕರವಾದಂತಹ ಸಂಗತಿಯನ್ನು ನಿಸ್ಸಂದೇಹವಾದ ವಾಸ್ತವಾಂಶಗಳೆಂಬಂತೆ ಗ್ರಹಿಸುವುದೂ ಅವುಗಳ ಬಗ್ಗೆ ಸಲ್ಲದ ಊಹಾಪ್ರೋಹಗಳನ್ನು ಹಬ್ಬಿಸಿ ಗುಲ್ಲೆಬ್ಬಿಸುವುದೂ ಉಭಯ ಪಕ್ಷಗಳವರಲ್ಲಿಯೂ ಕಾಣಬರುವ ಒಂದು ಬಗೆಯ ಕುತರ್ಕ. ಎಂದಿಗೂ ನಿಜವಾಗದ ಮತ್ತು ಅನೇಕವೇಳೆ ಖಂಡನೀಯವಾದ ಈ ಬಗೆಯ ನಿಂದೆ ಅಪವಾದಗಳೇ ಅಶ್ಲೀಲ ಲೇಖಕರಿಗೆ ಸ್ವಯಂವೇದ್ಯವಾದ ಸತ್ಯವಾಗಿ ಪರಿಣಮಿಸುವುವು. ಈ ನಿಂದೆ ಅಪವಾದಗಳು ಸುಳ್ಳು ಎಂದೂ ಸುಳ್ಳಲ್ಲದಿದ್ದರೂ ಸಂದೇಹಾಸ್ಪದವಾದುವು ಎಂದೂ ತಮ್ಮ ಅಂತರಂಗದಲ್ಲಿ ಗಾಢವಾಗಿ ನಂಬಿದ್ದರೂ ಈ ಲೇಖಕರು ಇವುಗಳ ವಿಷಯದಲ್ಲಿ ಎಲ್ಲರಿಂದಲೂ ಅಂಗೀಕೃತವಾದ ಮೂಲತತ್ತ್ವಗಳ ವಿಷಯದಲ್ಲಿ ಜನ ನಡೆದುಕೊಳ್ಳುವ ಹಾಗೆ ನಿಸ್ಸಂದೇಹಿಗಳಾಗಿಯೂ ನಿರ್ಭೀತರಾಗಿಯೂ ವರ್ತಿಸುತ್ತಾರೆ.

ಹೀಗೆ ಅಶ್ಲೀಲದ ಬುನಾದಿಯ ಮೇಲೆ ಕಟ್ಟಿದ ಮೇಲ್ಕಟ್ಟಡ ಬುನಾದಿಗೆ ತಕ್ಕಹಾಗೆ ಸುಳ್ಳಿನ ಮೇಲೆ ಸುಳ್ಳಿನ ಗೋಪುರವೇರಿಸಿ ದಂತೆ ಆದರೆ ಆಶ್ಚರ್ಯವಿಲ್ಲ. ಇಂತಹ ನಾಚಿಕೆಗೇಡಿನ ಸ್ಥಿತಿ ಮುಂದುವರಿದರೆ ಹೊಗಳಿಕೆ ತೆಗಳಿಕೆಗಳು ಸತ್ಪುರುಷರ ಕ್ರಿಯಾ ಪ್ರೇರಣೆಯ ಸಾಧನಗಳಾಗಿ ಉಳಿಯಲಾರವು.

ಈ ರಾಕ್ಷಸಪ್ರವೃತ್ತಿ ಮೇಲುಗೈಯಾಗಿದ್ದ ಕಾಲ, ಎಲ್ಲ ದೇಶದ ಆಡಳಿತದಲ್ಲಿಯೂ ಆಗಾಗ ಕಾಣಬಂದಿದೆ. ಪೋಪಿನ ಪರವಾಗಿ ಕೆಲವರೂ, ರಾಜನ ಪರವಾಗಿ ಕೆಲವರೂ ಗುಂಪು ಕಟ್ಟಿ ಕೊಂಡು ಇಟಲಿಯನ್ನು ಬಹುಕಾಲ ಜಗ್ಗಾಡಿದರು. ಲೀಗಿನ ವಿರೋಧವಾಗಿ ಕೆಲವರೂ, ಪರವಾಗಿ ಕೆಲವರೂ ಫ್ರಾನ್ಸಿನಲ್ಲಿ ಕಾದಾಡಿದರು. ಇಂತಹ ಅಲ್ಲೋಲಕಲ್ಲೋಲವಾದ ವಿಕ್ಷುಬ್ಧ ವಾತಾವರಣದಲ್ಲಿ ಹುಟ್ಟುವುದು ಮಾನವನ ದುರ್ದೈವವೇ ಸರಿ. ಜನರನ್ನು ಪಂಗಡಗಳನ್ನಾಗಿ ವಿಂಗಡಿಸುವುದಕ್ಕೂ ಸಭ್ಯರನೇಕ ರನ್ನು ದೇಶಸೇವೆಯ ನೆವದಿಂದ ತಮ್ಮ ಕಡೆಗೆ ಎಳೆದುಕೊಳ್ಳು ವುದಕ್ಕೂ ಚಾಣಾಕ್ಷರಾದವರ ಅಪಾರವಾದ ದುರಾಸೆಯೆ ಕಾರಣ. ಸಾರ್ವಜನಿಕಸೇವೆಯ ಆಸ್ಥೆಯಿಂದಾಗಿ ಪ್ರಾಮಾಣಿಕರಾದವರಲ್ಲಿ ಎಷ್ಟು ಮಂದಿಯ ಹೃದಯ ಅನೌದಾರ್ಯವೂ, ಅಸಂಸ್ಕೃತವೂ ಆದ ಆಶೋತ್ತರಗಳಿಂದ ತುಂಬಿ ಹೋಗಿಲ್ಲ! ಇನ್ನೊಬ್ಬರ ಹೇಳಿಕೆ ಕೇಳಿಕೆಗಳನ್ನು ನಂಬಿ ವಿಚಾರ ಮಾಡುವುದಕ್ಕೆ ಬದ ಲಾಗಿ ತಾವೇ ವಾಸ್ತವಾಂಶಗಳನ್ನು ಗ್ರಹಿಸಿ ವಿಚಾರ ಮಾಡಿದ್ದರೆ ಯಾವ ವ್ಯಕ್ತಿಗಳನ್ನು ಘನಗೌರವಗಳಿಂದ ಸನ್ಮಾನಿಸುತ್ತಿದ್ದರೋ ಅದೇ ವ್ಯಕ್ತಿಗಳನ್ನು ಈಗ ಅವರು ಪ್ರತಿಪಕ್ಷಕ್ಕೆ ಸೇರಿದವರೆಂಬ ಮಾತ್ರಕ್ಕೇ ಏನೇನು ವಿಘಾತಕ ಕೃತ್ಯಗಳಿಂದ ನೋಯಿಸಲಿಕ್ಕಿಲ್ಲ. ಎಂತೆಂತಹ ಅತ್ಯಾಚಾರಗಳಿಂದ ಹಿಂಸಿಸಲಿಕ್ಕಿಲ್ಲ. ಹೀಗೆ ಅತ್ಯಂತ

ಸತ್ಯನಿಷ್ಠರಾದವರು ಸಹ ಅಸಹ್ಯಕರವಾದ ತಪ್ಪುಗಳಿಗೂ ಪಕ್ಷ ವಿಶ್ವಾಸಗಳಿಗೂ ಆಕರ್ಷಿತರಾಗಿ ಘನತರವಾದ ದೇಶಸೇವೆಯ ನೆರಳಿನಲ್ಲಿಯೆ ಕಪ್ಪು ಹಿಡಿದು ಹೋಗುತ್ತಾರೆ. ಈ ಸಂದರ್ಭ ದಲ್ಲಿ 'ಲೋಕದಲ್ಲಿ ಮೂರ್ಖರೂ ದಗಾಕೋರರೂ ಇಲ್ಲದಿದ್ದರೆ ಎಲ್ಲರ ಮನಸ್ಸೂ ಒಂದಾಗುತ್ತಿತ್ತು' ಎಂಬ ಸ್ಪೇನ್ ದೇಶದ ಪ್ರಸಿದ್ಧವಾದ ಗಾದೆಯೊಂದರ ನೆನಪು ಬರುತ್ತದೆ.

ನನ್ನನ್ನು ಕೇಳಿದರೆ, ತಮಗೆ ಹಗೆಗಳಾದವರು ಅವರು ಯಾವ ಪಕ್ಷಕ್ಕೆ ಸೇರಿದ್ದರೂ ಸರಿಯೆ ತಮ್ಮ ಮೇಲೆ ನಡಸುವ ಪ್ರಯತ್ನಗಳನ್ನು ಎದುರಿಸಿ ತಾವು ಅನ್ಯೋನ್ಯವಾಗಿ ಬಾಳುವುದ ಕ್ಕಾಗಿ ಪ್ರಾಮಾಣಿಕರಾದವರೆಲ್ಲ ಒಟ್ಟಿಗೆ ಸೇರಿ ಒಂದು ಸಂಘವನ್ನು ಸ್ಥಾಪಿಸಿಕೊಳ್ಳಬೇಕೆಂದು ನಾನು ಹೃತ್ಪೂರ್ವಕವಾಗಿ ಆಶಿಸು ತ್ತೇನೆ. ಇಂತಹದೊಂದು ಸತ್ಯನಿಷ್ಠವಾದ ತಟಸ್ಥ ಪಕ್ಷವು ತಲೆ ಯೆತ್ತಿ ಬಾಳಿದ್ದೇ ಆದರೆ ಆಗ ಒಂದು ಪಕ್ಷಕ್ಕೆ ಬೇಕಾದವರೆಂಬ ಕಾರಣದಿಂದಲೆ ಅಯೋಗ್ಯರು ಪ್ರತಿಷ್ಠಿತ ಜೀವನದಲ್ಲಿ ಮೇಲೇ ರುವುದನ್ನಾಗಲಿ ತಮ್ಮ ಪಕ್ಷಕ್ಕೆ ಋಣಿಯಾಗಿರಬೇಕಾದಂತಹ ಕೆಲಸಗಳನ್ನು ಮಾಡಿಲ್ಲವೆಂಬ ಕಾರಣದಿಂದಲೇ ಯೋಗ್ಯರು ಅಲಕ್ಷಿತರಾಗುವುದನ್ನಾಗಲೀ ನಾವು ಕಾಣುವುದಿಲ್ಲ. ಆಗ ನಾವು ಪ್ರತಿಯೊಬ್ಬ ಮಹಾಪರಾಧಿಯನ್ನೂ ಗುಂಪಿನಿಂದ ಹೊರಗೆಳೆದು —ಅವನಷ್ಟೇ ದುರ್ಮದದಿಂದ ದುರ್ದಮನಾದವನೆಂದು ಕಾಣ ಬಂದರೂ ಬೇಟೆಯಾಡಿ ಬಲಿ ಹಾಕಬೇಕು. ಅಲ್ಲದೆ ಎಂತಹ ಅಸೂಯೆ ಮಾನನಷ್ಟಗಳಿಗೆ ಗುರಿಯಾಗಿದ್ದರೂ ಎಂತಹ ಅವಜ್ಞೆ ಅಪಮಾನಗಳಿಗೆ ಈಡಾಗಿದ್ದರೂ ಆ ಎಲ್ಲ ದುಃಖಿಗಳನ್ನೂ ನಿಷ್ಕಪಟಿಗಳನ್ನೂ ಕಾಪಾಡಿ ಧರ್ಮವನ್ನು ಪರಿರಕ್ಷಿಸಬೇಕು. ಒಟ್ಟಿನಲ್ಲಿ ನಮ್ಮೊಟ್ಟಿನ ಜನಗಳನ್ನು ಇನ್ನು ಮೇಲೆ ಎಂದಿಗೂ

ಇಂತಹ ಸಂಘದ ಸದಸ್ಯನಿಂದ ದೇಶಕ್ಕೆ ಕಡಿಮೆಯ ಉಪಕಾರ ವೇನೂ ಆದಂತಾಗುವುದಿಲ್ಲ.

ಇಕ್‌ನ್ಯೂಮನ್ ಎಂಬ ಒಂದು ಜಾತಿಯ ಮುಂಗಸಿಯು ಯಾವಾಗಲೂ ಮೊಸಳೆಯ ಮೊಟ್ಟೆಗಳನ್ನು ಹುಡುಕಿಕೊಂಡು ಹೋಗಿ ಅವುಗಳನ್ನು ಒಡೆದು ಹಾಕುವುದನ್ನೇ ತನ್ನ ಜೀವನದ ಆದ್ಯಕರ್ತವ್ಯವನ್ನಾಗಿ ಮಾಡಿಕೊಂಡಿರುವುದೆಂದು ಡೈಡೋರಸ್ ಸಿಕುಲಸನ ಪುಸ್ತಕದಲ್ಲಿ ಓದಿದಂತೆ ನನಗೆ ಜ್ಞಾಪಕ. ಈ ಪ್ರಾಣಿಯ ಇಂತಹ ಪ್ರವೃತ್ತಿ ಗಮನಾರ್ಹವಾದದ್ದು. ಅದು ಆಹಾರಕ್ಕಾಗಿ ಮೊಟ್ಟೆಗಳನ್ನು ಒಡೆಯುವುದಿಲ್ಲ. ಅಲ್ಲದೆ ಬೇರೆ ಯಾವ ಪ್ರಯೋಜನವೂ ಅದಕ್ಕೆ ಇರುವಂತಿಲ್ಲ. ಈ ಇಕ್ ನ್ಯೂಮನ್ ಮುಂಗಸಿಯ ಅವಿರಳವಾದ ಶ್ರದ್ಧೆಯೊಂದಿಲ್ಲವಿದ್ದರೆ ಈಜಿಪ್ಟ್ ದೇಶ ಈ ವೇಳೆಗಾಗಲೆ ಮೊಸಳೆಗಳಿಂದ ತುಂಬಿ ಹೋಗಿ ರುತ್ತಿತ್ತೆಂದು ಆತ ಹೇಳುತ್ತಾನೆ. ಏಕೆಂದರೆ ಈಜಿಪ್ಟಿನವರು ಈ ದುಷ್ಟ ಜಂತುಗಳನ್ನು ಕೊಲ್ಲುವುದಿರಲಿ, ದೇವತೆಗಳೆಂದು ಪೂಜೆಮಾಡುತ್ತಾರೆ.

ಸಾಮಾನ್ಯವಾಗಿ ಯಾವ ಒಬ್ಬ ಪಕ್ಷಮನೋಧರ್ಮಿಯ ನಡವಳಿಕೆಗಳನ್ನು ಗಮನಿಸಿದರೂ ಆತನಿಗೂ ಈ ನಿಸ್ವಾರ್ಥ ಪ್ರಾಣಿಗೂ ಯಾವ ಹೋಲಿಕೆಯೂ ಇಲ್ಲವೆಂಬುದು ವ್ಯಕ್ತವಾಗದೆ ಇರದು. ಇದಕ್ಕೆ ಪ್ರತಿಯಾಗಿ ವಿಶೇಷರೀತಿಯ ಶಕ್ತಿಸಾಮರ್ಥ್ಯ ಗಳನ್ನು ಪಡೆದ ಪ್ರತಿಪಕ್ಷದವರನ್ನು ಕೊಂದ ಮಾತ್ರದಿಂದಲೇ ಅವರ ಬುದ್ಧಿಸಾಮರ್ಥ್ಯಗಳು ತಮ್ಮಲ್ಲಿ ಒಡಮೂಡುತ್ತವೆ ಎಂಬ ಭ್ರಾಮಕ ಕಲ್ಪನೆಯಿಂದ ಧೂರ್ತರಂತೆ ಕೊಲೆಗೆಲಸದಲ್ಲಿ ಉದ್ಯುಕ್ತ ರಾಗುವ ರೂಕ್ಷರಾದ ರಷ್ಯದ ಟಾರ್ಟರರೊಡನೆ ಇವರಿಗೆ ಸಂಪೂರ್ಣವಾದ ಸಾಮ್ಯವಿದೆ ಎನ್ನುವುದು ವ್ಯಕ್ತವಾಗುತ್ತದೆ.

ಎಲ್ಲ ಪಕ್ಷಪಂಗಡಗಳಲ್ಲಿಯೂ ತ್ವೇಷಾಗ್ನಿಯಾಗಿ ಹೊತ್ತಿ ಉರಿಯುತ್ತಿರುವ ಈ ತೆರನಾದ ಕೆಟ್ಟ ರಾಗದ್ವೇಷಾದಿಗಳನ್ನು ನಿರ್ಮೂಲಗೊಳಿಸಲು ನನ್ನ ಬರಹಗಳಲ್ಲೆಲ್ಲ ಯಥಾಮತಿಯಾಗಿ ಯತ್ನಿಸಿರುವೆನಾದರೂ ಪ್ರಸ್ತುತ ಪ್ರಸಂಗದಲ್ಲಿ ಇನ್ನೂ ಹೆಚ್ಚಿನ ಸೇವೆ ಸಲ್ಲಿಸಲು ಅಪೇಕ್ಷಿಪಟ್ಟಿದ್ದೇನೆ. ಏಕೆಂದರೆ ಈ ಪಕ್ಷಮನೋಭಾವ ಪಟ್ಟಣಗಳಲ್ಲಿ ಕಾಣುವುದಕ್ಕಿಂತ ಒಂದು ಹೆಚ್ಚಿನ ರಂಗಿನಲ್ಲಿ ಹಳ್ಳಿಗಳ ಕಡೆ ಕಾಣಬರುತ್ತಿದೆ. ಹಳ್ಳಿಗಳಲ್ಲಿ ಈ ಪಕ್ಷಭಾವ ಗ್ರಾಮ್ಯವೂ ರೂಕ್ಷವೂ ಆದ ಪಾಶವೀಕೃತ್ಯಗಳ ಸಂಪರ್ಕವನ್ನು ಪಡೆಯುತ್ತದೆ. ಇಂತಹ ವೃಗ್ಯಮನೋಭಾವ ಸಭ್ಯ ನಾಗರಿಕರಿಗೆ ತೀರ ಅಪರಿಚಿತವಾದುದು. ಪರಸ್ಪರ ನಮಸ್ಕಾರಮಾಡಿ ಕೈಕೈ ಕುಲುಕುವುದರಲ್ಲಿ ಕೂಡ ತಮ್ಮ ತಮ್ಮ ಪಕ್ಷಗಳನ್ನು ಪ್ರಕಟಪಡಿಸುವಷ್ಟರಮಟ್ಟಿಗೆ ಹಳ್ಳಿಯ ಜನ ಮುಂದುವರಿದಿದ್ದಾರೆ. ನಗರದಲ್ಲಿರುವ ಪಕ್ಷ ಪ್ರತಿಪಕ್ಷಗಳ ನಾಯಕರು ಪರಸ್ಪರ ಸಂದರ್ಶಿಸಿದಾಗ ತೋರುಗಾಣಿಕೆಯ ಸಭ್ಯತೆಯನ್ನಾದರೂ ಮುಂದೆ ಮಾಡುವ ಉದಾರಬುದ್ಧಿಯುವರಾದರೆ ಅವರ ಹಳ್ಳಿಯ ಅನುಯಾಯಿಗಳು ಒಂದು ಕೋಳಿಯ ಅಂಕದಲ್ಲಿ ಕೂಡ ಸ್ನೇಹಭಾವದಿಂದ ಬೆರೆಯಲಾರರು. ಈ ದುರ್ಬುದ್ಧಿಯಿಂದಾಗಿ ಹಳ್ಳಿಗಳಲ್ಲಿ ಆಗಾಗ ವ್ಹಿಗ್ ಅಶ್ವಾರೋಹಿಗಳೂ ಟೋರಿ ನರಿ ಬೇಟೆಯವರೂ ಸಭೆ ನೆರೆಯುವುದುಂಟು. ಅಂದಮೇಲೆ ಪಂಚಾಯಿತಿ ಸಭೆಗಳ ಮುಂದೆ ಬರುವ ಲೆಕ್ಕವಿಲ್ಲದ ಉರಿಮೋರೆಗಳನ್ನೂ ನುಡಿಗಿಡಿಗಳನ್ನೂ ಪಿಸುಮಾತುಗಳನ್ನೂ ಪ್ರತ್ಯೇಕವಾಗಿ ಹೇಳಬೇಕಾದುದೇ ಇಲ್ಲ.

ನನ್ನ ಸ್ನೇಹಿತರಾದ ರೋಜರ್‌ಮಹಾಶಯನೂ ಅಂಡ್ರ್ಯೂ ಫ್ರೀಪೋರ್ಟ್‌ಮಹಾಶಯನೂ ಬೇರೆ ಬೇರೆ ಪಂಥದವರೆಂಬ

ಸಂಗತಿಯನ್ನು ಈ ಹಿಂದಿನ ಬರಹಗಳಲ್ಲಿ ಎಲ್ಲಿಯಾದರೂ ಹೇಳಿ ದೇನೆಯೊ ಇಲ್ಲವೊ ನನಗೆ ತಿಳಿಯದು. ಇದರಲ್ಲಿ ಮೊದಲನೆ ಯಾತ ಭೂಮಿಕಾಣಿಕೆಗಳ ಲೇವಾದೇವಿಗಳಲ್ಲಿ ಆಸಕ್ತನಿದ್ದರೆ ಎರಡನೆಯಾತ ವ್ಯಾಪಾರೋದ್ಯೋಗಗಳಲ್ಲಿ ಆಸಕ್ತನಾದವನಾಗಿ ದಾನೆ. ಇವರಿಬ್ಬರ ಈ ಭಿನ್ನಭಾವ ಹಾಳತವಾಗಿದ್ದು ಅನೇಕ ವೇಳೆ ನಮ್ಮ ಸಂಘದ ಸದಸ್ಯರೆಲ್ಲರ ಬೇಸರ ಪರಿಹಾರವಾಗು ವಂತಹ ಪರಸ್ಪರ ಸರಸ ಸಲ್ಲಾಪಗಳಲ್ಲಿ ಪರ್ಯವಸಾನಗೊಳ್ಳು ತ್ತದೆ. ಒಟ್ಟನಲ್ಲಿ ರೋಜರ್ ಶ್ರೀಮಂತನು ಪಟ್ಟಣದಲ್ಲಿ ಕಾಣ ಬರುವುದಕ್ಕಿಂತ ಸ್ವಲ್ಪ ಹೆಚ್ಚಿನ ಟೋರಿ ಬಣ್ಣದಲ್ಲಿ ಹಳ್ಳಿಯ ಕಡೆ ಹೋದಾಗ ಕಾಣಬರುತ್ತಾನೆ. ತನ್ನ ಸ್ಥಾನಮಾನಗಳಿಗೆ ಹೀಗಿರಬೇಕಾದುದು ಅವಶ್ಯವೆಂದು ಆತ ನನಗೆ ಗುಟ್ಟಾಗಿ ಹೇಳು ವುದುಂಟು. ಲಂಡನ್ನಿನಿಂದ ಹೊರಟವರು ಅವನ ಮನೆಗೆ ಹೋಗುವವರೆಗೂ ಒಮ್ಮೆಯಾದರೂ ನಾವು ವ್ಹಿಗ್ ಖಾನಾವಳಿ ಗಳಲ್ಲಿ ಊಟ ಮಾಡಿದುದಿಲ್ಲ. ಮರೆತಾದರೂ ಒಮ್ಮೆ ಗಾಡಿ ಹೊಡೆಯುವವನು ನಮ್ಮ ಬಂಡಿಯನ್ನು ತಪ್ಪು ಸ್ಥಳಗಳಲ್ಲಿ ನಿಲ್ಲಿ ಸಿದ್ದರೆ ಕೂಡಲೆ ಅವನ ಸೇವಕರು ಓಡೋಡಿ ಬಂದು ಆ ಖಾನಾ ವಳಿಯ ಮಾಲೀಕ ಕಳೆದ ಚುನಾವಣೆಯಲ್ಲಿ ಟೋರಿಗಳಿಗೆ ವಿರುದ್ಧವಾಗಿ ಓಟು ಮಾಡಿದವನೆಂದು ಪಿಸುಗುಟ್ಟಿ ಹೋಗ್ಗು ತ್ತಿದ್ದರು. ಇದರಿಂದ ಅನೇಕ ವೇಳೆ ನಾವು ಟೋರಿ ಖಾನಾವಳಿ ಗಳನ್ನೆ ಹುಡುಕಿಕೊಂಡು ಹೋಗಿ ಹೊಲಸು ತಿಂಡಿತೀರ್ಥಗಳನ್ನು ಮುಕ್ಕಿ ಕೊಳಕು ಹಾಸಿಗೆಗಳಲ್ಲಿ ಮಲಗಬೇಕಾಗಿ ಬಂತು. ನಮಗೆ ಖಾನಾವಳಿಯ ಊಟವಸತಿಗಳ ಕಡೆಗೆ ಇದ್ದ ಲಕ್ಷ್ಯಕ್ಕಿಂತ ಆ ಖಾನಾವಳಿಯ ಮಾಲೀಕನ ಪಕ್ಷದ ಕಡೆಗೆ ಇದ್ದ ಲಕ್ಷ್ಯ ಹೆಚ್ಚಿನ ದಾಗಿತ್ತು. ಮಾಲೀಕ, ರೋಜರನ ಕಡೆಯವನೆಂದರೆ ಸಾಕು

ಅವನು ಕೊಡುವ ಊಟ ವಸತಿಗಳನ್ನು ನಾವು ಚರ್ಚಿಸುವಂತಿರ ಲಿಲ್ಲ. ಇದರಿಂದ ನನಗೆ ಹೆಚ್ಚಿನ ಅನಾನುಕೂಲವೆ ಆಯಿತು. ಮಾಲೀಕ ಎಷ್ಟೆಷ್ಟು ಉತ್ತಮನಾದರೆ ಊಟ ಉಪಹಾರ ಅಷ್ಟಷ್ಟು ಕೀಳಾಗಿರುತ್ತಿತ್ತು. ಕಾರಣವಿಷ್ಟೇ, ರೋಜರನ ಸ್ನೇಹಿತರು ಎಂತಹ ಕೀಳ್ತರನಾದ ಊಟವನ್ನಾದರೂ ಉಂಡು ಎಷ್ಟು ಕೊಳಕಾದ ಕಡೆಯಲ್ಲಿಯಾದರೂ ಇರಬಲ್ಲರು ಎಂಬು ದನ್ನು ಆ ಮಾಲೀಕ ಅರಿತಿರುತ್ತಿದ್ದ. ಈ ಎಲ್ಲ ಕಾರಣಗಳಿಂದ ರೋಜರ್ ಪ್ರಾಮಾಣಿಕನೆಂದು ಹೊಗಳಿದ ಮಾಲೀಕನ ಹೋಟ ಲನ್ನು ಹೋಗುವುದಕ್ಕೆ ನಾನು ಹೆದರುತ್ತಿದ್ದೆ.

ರೋಜರ್ ಮಹಾಶಯನೊಡನೆ ಹಳ್ಳಿಯಲ್ಲಿ ವಾಸಮಾಡು ತ್ತಿರುವಾಗಿನಿಂದ ಈ ಸಂಕುಚಿತವಾದ ಪಕ್ಷಮನೋಭಾವದ ಅನೇಕ ಉದಾಹರಣೆಗಳನ್ನು ದಿನವಹಿ ನೋಡುತ್ತಿದ್ದೇನೆ. ಮೊನ್ನೆ ಪಕ್ಷದ ಹಳ್ಳಿಯಲ್ಲಿ ಸಂತೆಯ ದಿನ ಬೋಲ್ಸ್ ಆಟದಲ್ಲಿ ಹುಲ್ಲುಮೈದಾನದಲ್ಲಿ ನಿಂತಿರುವಾಗ (ಇಲ್ಲಿಯೇ ವಾರ ವಾರವೂ ಒಂದು ಪಂಗಡದವರು ಬಂದು ಸೇರುವುದು) ಆ ಜನರ ಗುಂಪಿ ನಲ್ಲಿ ಉಳಿದ ಎಲ್ಲರಿಗಿಂತ ನೀಟಾಗಿದ್ದ ಸಭ್ಯನಾಗಿ ಕಂಡು ಬಂದ ಅಪರಿಚಿತ ವ್ಯಕ್ತಿಯೊಬ್ಬನನ್ನು ನೋಡಿದೆ. ಆತ ಒಳ್ಳೆಯ ಆಟ ಗಾರನಾಗಿ ಕಂಡುಬಂದರೂ ಯಾರೂ ಅವನನ್ನು ಆಟಕ್ಕೆ ಸೇರಿಸಿ ಕೊಳ್ಳದಿದ್ದುದನ್ನು ಕಂಡು ಮತ್ತಷ್ಟು ಆಶ್ಚರ್ಯವಾಯಿತು. ಆ ಮೇಲೆ ವಿಚಾರಿಸಿದ್ದರಲ್ಲಿ ಹಿಂದಣ ಪಾರ್ಲಿಮೆಂಟಿನ ಚುನಾ ವಣೆಯಲ್ಲಿ ಆತ ಅವರಿಗೆ ವಿರೋಧವಾಗಿ ಓಟುಕೊಟ್ಟಿದ್ದನೆಂಬುದು ತಿಳಿಯಿತು. ಈ ಒಂದು ಕಾರಣಕ್ಕಾಗಿ ಯಾರೊಬ್ಬರೂ ಅವ ನನ್ನು ಆಟಕ್ಕೆ ಕರೆದು ಅವನನ್ನು ಸೋಲಿಸಿ ಅವನ ಹಣವನ್ನು ಪಡೆಯುವುದಕ್ಕೆ ಕೂಡ ಮನಸ್ಸು ಮಾಡದೆ ಅವನೊಡನೆ ವ್ಯವ ಹಾರವನ್ನು ಬಿಟ್ಟು ಬಿಟ್ಟಿದ್ದರು.

ಈ ತೆರನಾದ ಇನ್ನು ಕೆಲವು ನಿದರ್ಶನಗಳಲ್ಲಿ ನನಗೇ ಸಂಬಂಧಪಟ್ಟ ಸಂಗತಿಯೊಂದನ್ನು ಮಾತ್ರ ಹೇಳದೆ ಇರಬಾರದು ಈಗ ಕೆಲವು ದಿವಸಗಳ ಹಿಂದೆ ವಿಲ್ ನಮಗೆಲ್ಲ ಒಬ್ಬ ದೊಡ್ಡ ಮನುಷ್ಯರ ವಿಷಯವಾಗಿ ಅನೇಕ ಕಥೆಗಳನ್ನು ಹೇಳುತ್ತಿದ್ದ. ಈ ಕಥೆಗಳಿಗೆಲ್ಲ ಅವನಿಗೆ ಎಲ್ಲಿ ಆಧಾರವೋ ಶಿವನೇ ಬಲ್ಲ. ಪಟ್ಟಣಗಳಲ್ಲಿ ಪಿಸುಗುಟ್ಟಲು ಕೂಡ ಹಿಂದೆಗೆಯುವ ಈ ತೆರನಾದ ಕಥೆಗಳು ಹಳ್ಳಿಗಳಲ್ಲಿ ಹಬ್ಬುವುದುಂಟೆ? ಎಂದು ನಾನು ದುರುಗುಟ್ಟಿಕೊಂಡು ನೋಡಲು ಆತ ತನ್ನ ಕಥೆಯ ದಾರ ಕಡಿದು ಸುಮ್ಮನಾದ. ಊಟ ಆದಮೇಲೆ ಗುಟ್ಟಾಗಿ ಹೋಗಿ ರೋಜರನನ್ನು ಕೇಳಿದನಂತೆ, ನಾನೇನಾದರೂ ವ್ಹಿಗ್ ಪಕ್ಷದವನೇ ಎಂದು.

ಇಂತಹ ವ್ಯಾಜ್ಯಸಾಜ್ಯಗಳ ಭೇದಬುದ್ಧಿಯನ್ನು ನೋಡಿ ನನಗೆ ತುಂಬ ದಿಗಿಲಾಗಿದೆ; ನಮ್ಮ ಗುಣಶೀಲಗಳನ್ನೂ ವ್ಯವಹಾರಜ್ಞಾನವನ್ನೂ ಹಾಳುಮಾಡಿ ನಮ್ಮನ್ನು ಅನಾಗರಿಕ ದಸ್ಯುಗಳನ್ನಾಗಿ ಮಾಡಿಬಿಡುವುದಲ್ಲದೆ ಹಗೆತನವನ್ನು ಬೆಳಸಿ ಬಾಂಧವ್ಯವನ್ನು ದೂರಮಾಡಿ ನಮ್ಮ ಈಗಿನ ರಾಗದ್ವೇಷಗಳನ್ನು ನಮ್ಮ ಮುಂದಣ ಪೀಳಿಗೆಗೂ ಹಬ್ಬುವಂತೆ ಮಾಡುವ ಈ ಪಕ್ಷಭಾವವನ್ನು ಕಂಡರೆ ಭಯವಾಗುತ್ತದೆ. ನನ್ನಮಟ್ಟಿಗೆ ಹೇಳುವುದಾದರೆ ಈ ನಮ್ಮ ನಮ್ಮ ಅಂತರಗಳಲ್ಲಿ ಮುಂದಣ ಯಾದವೀ ಕಲಹದ ಬೀಜಾವಾಪನೆ ನಡೆದುಹೋಗಿದೆ ಎನ್ನುವ ಭಯ ನನಗೆ ಆಗಾಗ ಉಂಟಾಗುತ್ತಿದೆ. ಅಂತೆಯೇ ಮುಂದಣ ಹಗೆತನದ ಮೂಲಭೂತ ತತ್ವಗಳಂತಿರುವ ಈ ಪಕ್ಷಭಾವದಿಂದ ನಮ್ಮ ಮಕ್ಕಳು, ಮೊಮ್ಮಕ್ಕಳುಗಳಿಗೆ ಆಗುವ ಕಷ್ಟನಷ್ಟಗಳನ್ನು ನೆನೆದು ನಾನು ಚಿರದುಃಖಿಯಾಗಿದ್ದೇನೆ.

# ಪ್ರಾಣಿಗಳಲ್ಲಿ ಸಹಜಪ್ರವೃತ್ತಿ

## ೧

ನನ್ನ ವೇಳೆಯ ಬಹುಭಾಗವನ್ನೆಲ್ಲ ತನ್ನ ಮನೆಯ ಕೋಳಿಗಳೊಡನೆ ಕಳೆಯುತ್ತಿರುವೆನೆಂದು ನನ್ನ ಮಿತ್ರ ರೋಜರ್ ಮಹಾಶಯನು ನನ್ನನ್ನು ಆಗಾಗ ಹಾಸ್ಯಮಾಡುವುದುಂಟು. ಒಂದೆರಡು ಬಾರಿ ಹಕ್ಕಿಯ ಗೂಡೊಂದನ್ನು ನೋಡುತ್ತಿದ್ದಾಗ, ಅನೇಕವೇಳೆ ಮರಿಗಳೊಡನೆ ಇರುವ ಕೋಳಿಗಳನ್ನು ಒಂದೆರಡು ಗಂಟೆಗಳ ಕಾಲ ನೋಡುತ್ತಿದ್ದಾಗ, ಆತ ನನಗೆ ಗೊತ್ತಿಲ್ಲದ ಹಾಗೆ ಹಿಂದಿನಿಂದ ಬಂದು ಸೇರಿಕೊಂಡಿದ್ದುಂಟು. ತನ್ನ ಮನೆಯ ಪ್ರತಿಯೊಂದು ಕೋಳಿಯ ವಿಷಯದಲ್ಲಿಯೂ ನನಗೆ ನಿಕಟವಾದ ಪರಿಚಯವಿರುವುದೆಂಬ ನಂಬಿಕೆ ತನಗಿರುವುದಾಗಿ ಆತ ಹೇಳುತ್ತಾನೆ. ಇಂಥವನೇ ಹುಂಜ, ನನ್ನ ಮೆಚ್ಚಿಗೆಯ ಹುಂಜವೆಂದು ಕರೆಯುತ್ತಾನೆ. ತನಗಿಂತಲೂ ತನ್ನ ಕೋಳಿ ಬಾತುಗಳಿಗೆ ನನ್ನ ಸಹವಾಸ ಹೆಚ್ಚಾಗಿ ದೊರೆಯುತ್ತಿದೆ ಎಂದು ಆಗಾಗ ಗೊಣಗುತ್ತಾನೆ.

ಹಳ್ಳಿಗಳಲ್ಲಿ ವಾಸಮಾಡುವಾಗ ಅಗತ್ಯವಾಗಿ ತಿಳಿಯಬೇಕಾದ ಸೃಷ್ಟಿ ವೈಚಿತ್ರ್ಯವನ್ನು ನೋಡುವುದರಲ್ಲಿ ನನಗೆ ತುಂಬ ಸಂತೋಷವೆಂಬುದನ್ನು ಒಪ್ಪಿಕೊಳ್ಳುತ್ತೇನೆ. ಪ್ರಕೃತಿವಿಜ್ಞಾನದ ಪುಸ್ತಕಗಳನ್ನು ವಿಶೇಷವಾಗಿ ಓದಿರುವ ನನಗೆ ಈ ಸಂದರ್ಭಗಳಲ್ಲೆಲ್ಲ ಗ್ರಂಥಕರ್ತರು ಹೇಳಿರುವ ಅನೇಕ ಸಂಗತಿಗಳು ಅವಶ್ಯವಾಗಿ ನೆನಪಿಗೆ ಬರುತ್ತವೆ. ಅಂತಹವುಗಳನ್ನು ನಾನೆ ಕಣ್ಣಾರೆ ಕಂಡವುಗಳೊಡನೆ ಹೋಲಿಸಿ ನೋಡುತ್ತೇನೆ. ಹೀಗೆ ನೋಡು

ವಾಗ, ದೇವರಿದ್ದಾನೆ ಎನ್ನುವುದಕ್ಕೆ, ಪ್ರಾಣಿಗಳ ಶೀಲ ಸ್ವಭಾವಗಳ ಚರಿತ್ರೆಯಿಂದ ವ್ಯಕ್ತವಾಗುವ ಅಂಶಗಳೇ ಪ್ರಬಲವಾದ ಪ್ರಮಾಣಗಳೆಂಬ ನಿಶ್ಚಲವಾದ ನಂಬಿಕೆ ಮೂಡುತ್ತದೆ.

ಪ್ರತಿಯೊಂದು ಪ್ರಾಣಿಯ ರಚನೆಯೂ ಮತ್ತೊಂದು ಪ್ರಾಣಿಯ ರಚನೆಗಿಂತ ಭಿನ್ನವಾಗಿರುತ್ತದೆ. ಆದರೂ ಯಾವ ಪ್ರಾಣಿಯ ಮಾಂಸಖಂಡಗಳ ರಚನೆಯಲ್ಲಿಯಾಗಲಿ ನರನಾಳಗಳ ರೀತಿಯಲ್ಲಿಯಾಗಲೀ ಅದರ ಜೀವನ ಸ್ವಭಾವಕ್ಕೆ ಉಪಯುಕ್ತವಲ್ಲದ ರೀತಿ ರಚನೆಗಳ ನಿರ್ಮಾಣ ಕಾಣಬರುವುದಿಲ್ಲ.

ಕಾಮವೂ, ಹಸಿವೆಯೂ ಎಲ್ಲ ಪ್ರಾಗಳಲ್ಲಿಯೂ ಕಾಣಬರುವ ತೀವ್ರತಮವಾದ ತೃಷೆ. ಮೊದಲನೆಯದು ಸಂತಾನಾಭಿವೃದ್ಧಿಯ ನಿರಂತರ ಕರೆ; ಎರಡನೆಯದು ಆತ್ಮಸಂರಕ್ಷಣೆಯ ನಿತ್ಯ ಮೊರೆ.

ತಂದೆ ತಾಯಿಗಳು ತಮ್ಮ ಮರಿಗಳ ವಿಷಯದಲ್ಲಿ ತೋರ್ಪಡಿಸುವ ಸಂತಾನ ಸಂರಕ್ಷಣೆಗೆ ಆಗತ್ಯವಿರುವಷ್ಟರಮಟ್ಟಿನ ಲಾಲನ ಕ್ರಮದ ತರತಮ ಭಾವಗಳನ್ನು ಪರಿಶೀಲಿಸಿದರೆ ಆಶ್ಚರ್ಯವಾಗುತ್ತದೆ. ಕೆಲವು ಪ್ರಾಣಿಗಳು ಸಂದರ್ಭ ಒದಗಿಬಂದ ಹಾಗೆ ಎಲ್ಲಿ ಅಂದರೆ ಅಲ್ಲಿ ಮೊಟ್ಟೆಗಳನ್ನು ಇಟ್ಟುಬಿಡುತ್ತವೆ. ಕೆಲವು ಹುಳುಗಳು, ಅನೇಕ ಜಾತಿಯ ಮೀನುಗಳು ಈ ಬಗೆಯವು.

ಸ್ವಲ್ಪ ನಾಜೂಕಿನ ಇತರ ಪ್ರಾಣಿಗಳು ಮೊಟ್ಟೆಗಳನ್ನಿಡಲು ಅನುಕೂಲವಾದ ಸ್ಥಳಗಳನ್ನು ಕಂಡುಹಿಡಿದು ಅಲ್ಲಿ ಮೊಟ್ಟೆಗಳನ್ನಿಡುತ್ತವೆ; ಹಾವು, ಮೊಸಳೆ, ಉಷ್ಟ್ರಪಕ್ಷಿಗಳು ಈ ಬಗೆಯವು. ಉಳಿದವುಗಳು ಮೊಟ್ಟೆಗನ್ನಿಟ್ಟು ಕಾವು ಕೊಟ್ಟು ಮರಿಮಾಡಿ ಅವು ತಮ್ಮ ಪಾಡಿಗೆ ತಾವು ವಿಹರಿಸುವವರೆಗೆ ಕಾಪಾಡುತ್ತವೆ.

ಒಂದೊಂದು ಜಾತಿಯ ಹಕ್ಕಿಯೂ ಒಂದೊಂದು ನಿರ್ದಿಷ್ಟ ವಾದ ಕ್ರಮದಲ್ಲಿ ಗೂಡು ಕಟ್ಟಿಕೊಳ್ಳುತ್ತದೆ. ಅಲ್ಲದೆ ಆಯಾ ಜಾತಿಯ ಪ್ರತಿಯೊಂದು ಹಕ್ಕಿಯೂ ಅದೇ ಕ್ರಮವನ್ನು ಅನು ಸರಿಸುತ್ತವೆ. ಈ ಯೋಜನೆಯನ್ನು ಏನೆಂದು ಕರೆಯೋಣ! ಇದು ಅನುಕರಣೆಯಾಗಿರಲಾರದು. ಕಾಗೆಯ ಮೊಟ್ಟೆಯೊಂದನ್ನು ತಂದು ಕೋಳಿ ಕಾವು ಕೊಡುವ ಮರಿಮಾಡುವಂತೆ ಏರ್ಪಡಿಸಿ, ಅದು ಮರಿಯಾದಾರಭ್ಯ ತನ್ನ ಜಾತಿಯ ಇತರ ಹಕ್ಕಿಯ ಗೂಡನ್ನು ನೋಡಲು ಕೂಡ ಅವಕಾಶವಾಗದಂತೆ ಮಾಡಿದರೂ ಆ ಕಾಗೆಯ ಮರಿ ಕಟ್ಟುವ ಗೂಡು ಒಂದು ಕಡ್ಡಿ ಕೂಡ ಅತ್ತಿತ್ತ ಆಗದಹಾಗೆ ತನ್ನ ಜಾತಿಯ ಇತರ ಹಕ್ಕಿಗಳು ಕಟ್ಟುವ ಗೂಡಿ ನಂತೆಯೇ ಇರುತ್ತದೆ. ಇದನ್ನು ವಿವೇಚನಾಶಕ್ತಿ ಎಂದೂ ಹೇಳು ವಂತಿಲ್ಲ. ಮನುಷ್ಯರಿಗಿರುವಂತೆಯೇ ಅವುಗಳಿಗೂ ವಿವೇಚನಾ ಶಕ್ತಿ ಇದ್ದಿದ್ದರೆ ತಮ್ಮ ತಮ್ಮ ಅನುಕೂಲಕ್ಕೆ ತಕ್ಕಂತೆ ಅವು ಗೂಡು ಕಟ್ಟಿಕೊಳ್ಳುತ್ತಿದ್ದವು. ಹಾಗೆ ಕಟ್ಟಿದ ಗೂಡುಗಳೂ ನಮ್ಮ ಕಟ್ಟಡಗಳ ಹಾಗೆ ಬೇರೆ ಬೇರೆ ಮಾದರಿಯಲ್ಲಿರುತ್ತಿದ್ದವು.

ಕಾವು ಕೊಡುವ ಮರಿಮಾಡಲು ಯಾವ ಹದದ ಶಾಖ ಬೇಕೋ ಅದೇ ಹದದ ಶಾಖವನ್ನು ಕೊಡುವ ಋತು ಧರ್ಮವೇ ಆ ಮರಿಗಳ ಪ್ರಾಣರಕ್ಷಣೆಗೂ ಸಂಗೋಪನೆಗೂ ಅನುಕೂಲ ವಾಗುವಂತೆ ಮರಗಳಲ್ಲಿ ಎಲೆಗಳನ್ನೂ ಹೊಲಗಳಲ್ಲಿ ಗರಿಕೆಗಳನ್ನೂ ಚಿಗುರಿಸುತ್ತದೆ. ಅಲ್ಲದೆ ಆಯಾ ಜಾತಿಯ ಮರಿಗಳಿಗೆ ಆಹಾರ ವಾಗುವಂತೆ ಲಕ್ಷೋಪಲಕ್ಷ ಹುಳುಹುಪ್ಪಟೆಗಳನ್ನು ಸೃಷ್ಟಿಮಾಡು ತ್ತದೆ. ಇದು ಮಹದಾಶ್ಚರ್ಯಕರವಲ್ಲವೆ!

ಹಾಗೆಯೇ ಮರಿಗಳ ವಿಷಯದಲ್ಲಿ ತಂದೆತಾಯಿಗಳ ಪ್ರೀತಿ ಇರುವಷ್ಟು ಕಾಲ ಉತ್ಕಟವಾಗಿರುವುದೂ ಮರಿಗಳ

ಸಂರಕ್ಷಣೆಗೆ ಅವಶ್ಯವಿರುವಷ್ಟುಕಾಲ ಆ ಉತ್ಕಟ ಪ್ರೇಮ ಪ್ರಕಟ ವಾಗುವುದೂ ಆಶ್ಚರ್ಯಕರವಲ್ಲವೆ!

ಇಂತಹ ಸ್ವಾಭಾವಿಕವಾದ ಉತ್ಕಟ ಪ್ರೇಮವನ್ನು ನಿದರ್ಶನಪೂರ್ವಕವಾಗಿ ವಿವರಿಸುವ ರಾಕ್ಷಸ ಪ್ರಯೋಗವೊಂದನ್ನು ಪ್ರಸಿದ್ಧಲೇಖಕನ ಗ್ರಂಥವೊಂದರಲ್ಲಿರುವಂತೆ ಸ್ವಲ್ಪ ದೀರ್ಘವಾಗಿಯೇ ವಿವರಿಸುತ್ತೇನೆ. ಇಂತಹ ದಾರುಣವಾದ ಪ್ರಯೋಗವನ್ನು ವಿವರಿಸುವ ನನ್ನನ್ನು ವಾಚಕರು ಕ್ಷಮಿಸಬೇಕು. ಏಕೆಂದರೆ ಈ ಪ್ರಯೋಗಕ್ಕಿಂತಲೂ ಹೆಚ್ಚು ಪರಿಣಾಮಕಾರಿಯಾಗುವಂತೆ ಈ ಉತ್ಕಟಪ್ರೇಮವನ್ನು ವಿವರಿಸುವ ಬೇರೆ ರೀತಿಯೇ ಇಲ್ಲ. ಶಸ್ತ್ರ ಪ್ರಯೋಗದಲ್ಲಿ ಹೆಸರಾದ ವಿಜ್ಞಾನಿಯೊಬ್ಬನು ಹೆಣ್ಣು ನಾಯಿಯ ದೇಹದ ಒಂದು ಭಾಗವನ್ನು ಸ್ವಲ್ಪ ಕೊಯ್ದು ಆ ನಾಯಿ ದುಸ್ಸಹವಾದ ವೇದನೆಯಲ್ಲಿರುವಾಗ ಮರಿಯನ್ನು ಅದರ ಮುಂದೆ ಹಿಡಿದನು. ಒಡನೆಯೇ ತಾಯಿ ತನ್ನ ಸಂಕಟವನ್ನು ಮರೆತು ಮರಿಯನ್ನು ನೆಕ್ಕಲಾರಂಭಿಸಿತು. ಒಂದು ಕ್ಷಣಕಾಲವಾದರೂ ತಾಯಿಗೆ ತನ್ನ ನೋವು ಮರೆತಂತಿತ್ತು. ಮರಿಯನ್ನು ಬೇರೆ ಮಾಡಿದಾಗ ಮರಿಯಲ್ಲಿಯೇ ನೆಟ್ಟನೋಟವುಳ್ಳ ತಾಯಿ ತನ್ನ ಶಸ್ತ್ರವ್ರಣದ ನೋವಿಗಿಂತ ಹೆಚ್ಚಾಗಿ ಮರಿಯು ದೂರ ಹೋದುದಕ್ಕಾಗಿ ಮರುಗುವ ಸಂಕಟವೇ ಹೆಚ್ಚಿನದೆಂಬಂತೆ ನರಳುವುದಕ್ಕೆ ಆರಂಭಿಸಿತು!

ಈ ಸ್ವಾಭಾವಿಕವಾದ ಪ್ರೀತಿ, ವಿಚಾರಪರರಾದ ಮಾನವರಲ್ಲಿ ಕಾಣಬರುವುದಕ್ಕಿಂತಲೂ ಉತ್ಕಟವಾಗಿ ಪ್ರಾಣಿಗಳಲ್ಲಿ ಕಾಣಬರುವುದರ ಜೊತೆಗೆ ಈ ಪ್ರೀತಿ, ಮರಿಗಳಿಗೆ ಉಪಯೋಗಕರವಾಗುವಷ್ಟು ಕಾಲ ಮಾತ್ರ ಪ್ರಕಟವಾಗಬೇಕಲ್ಲದೆ ಅನವಶ್ಯಕವಾಗಿ ಹೆಚ್ಚುಕಾಲ ಪ್ರಕಟವಾಗಿ ತಂದೆ ತಾಯಿಗಳಿಗೆ

ತೊಂದರೆಯಾಗಬಾರದೆಂದೂ ಭಗವಂತನು ಯೋಚಿಸಿರುವಂತೆ ತೋರುತ್ತದೆ. ಮರಿಗಳಿಗೆ ತಾಯ ಸಂರಕ್ಷಣೆ ಬೇಕಾಗಿಲ್ಲವೆಂದು ತೋರುವ ಕಾಲಕ್ಕೇ ತಾಯಿ ತನ್ನ ಮರಿಯ ಮೇಲಣ ಪ್ರೀತಿಯನ್ನು ಕಡಿಮೆಮಾಡಿಕೊಳ್ಳುತ್ತದೆ. ಮರಿಗಳು ತಮ್ಮ ಪಾಡಿಗೆ ತಾವು ತಮ್ಮ ಆಹಾರವಿಹಾರಗಳಲ್ಲಿ ತೊಡಗುವುದಕ್ಕೆ ಬಿಟ್ಟು ಬಿಡುತ್ತದೆ. ಆದರೆ ತಮ್ಮ ಪೋಷಣೆ ಇಲ್ಲದೆ ಮರಿಗಳು ಸಾಯುವ ಸ್ಥಿತಿಯಲ್ಲಿದ್ದರೆ ತಾಯಿ ತನ್ನ ಆಸ್ಥೆಕೆಯನ್ನು ಮುಂದುವರಿಸುತ್ತವೆ ರೆಕ್ಕೆ, ಕೊಕ್ಕು ಬಲಿತ ಕೂಡಲೆ ಮರಿಗಳನ್ನು ತಮ್ಮ ಗೂಡುಗಳಿಂದ ಹಾರಿಸುವ ಹಕ್ಕಿಗಳಲ್ಲಿ ಇಂತಹ ಪ್ರೀತಿಯ ವಿಧಾನ ಕಂಡುಬರುತ್ತದೆ. ಮರಿಗಳು ಕಾಲುಕಟ್ಟಿ ಹಾಕುವುದರ ಮೂಲಕವಾಗಿಯಾಗಲಿ ಪಂಜರದಲ್ಲಿಡುವುದರ ಮೂಲಕವಾಗಿಯಾಗಲಿ ಆಹಾರ ಸಿಗದೆ ಸಾಯುವಂತಾದರೆ ತಾಯಿ ಹಕ್ಕಿ ಮರಿಗಳನ್ನು ಗುಟುಕು ಕೊಟ್ಟು ಪೋಷಿಸುವ ಭಾರವನ್ನು ಮತ್ತೆ ಹೊರುತ್ತದೆ.

ಇಂತಹ ಸಹಜ ಪ್ರೀತಿ ತಂದೆತಾಯಿಗಳ ಕಡೆಯಿಂದ ಮರಿಗಳ ಕಡೆಗೆ ಇಳಿದಿರುವಂತೆ ಮರಿಗಳ ಕಡೆಯಿಂದ ತಂದೆ ತಾಯಿಗಳ ಕಡೆಗೆ ಏರಿಲ್ಲ. ಇಂತಹ ಪ್ರೀತಿ ತಂದೆತಾಯಿಗಳ ಪ್ರಾಣರಕ್ಷಣೆಗೇನೂ ಬೇಕಿಲ್ಲವಾಗಿ ಯಾವ ಮರಿಯೂ ತನ್ನ ತಂದೆತಾಯಿಗಳನ್ನು ಪ್ರೀತಿಸುವುದಾಗಲೀ ಆಹಾರಾದಿಗಳಿಂದ ಪೋಷಿಸುವುದಾಗಲೀ ಕಾಣಬರುವುದಿಲ್ಲ. ವಿಚಾರಶಕ್ತಿಯಿರುವ ಮನುಷ್ಯರಲ್ಲಿ ಕೂಡ ತಂದೆತಾಯಿಗಳು ಮಕ್ಕಳ ಲಾಲನೆಪಾಲನೆಗಳಲ್ಲಿ ತೋರುವ ಪ್ರೇಮ ಅಕ್ಕರೆಗಳನ್ನು ಅದೇ ಪ್ರಮಾಣದಲ್ಲಿ ಮಕ್ಕಳು ಹಿಂದಿರುಗಿಸುವುದು ಕಾಣಬರುತ್ತಿಲ್ಲ.

ಮಕ್ಕಳು ತಮ್ಮ ಜನ್ಮದಾತೃಗಳೂ ಪ್ರಾಣಪೋಷಕರೂ

ಸುಖಾಪೇಕ್ಷಿಗಳೂ ಆದ ತಂದೆ ತಾಯಿಗಳ ವಿಷಯದಲ್ಲಿ ಹೆಚ್ಚಿನ ಪ್ರೀತಿವಾತ್ಸಲ್ಯಗಳನ್ನು ತೋರುವುದು ಸ್ವಾಭಾವಿಕವೆನ್ನಬಹು ದಾದರೂ ಕೌಟುಂಬಿಕ ಪ್ರೇಮದಲ್ಲಿ ಮಕ್ಕಳ ಮೇಲೆ ತಂದೆತಾಯಿ ಗಳು ತೋರಿಸುತ್ತಿರುವ ಪ್ರೀತಿಯೇ ಹೆಚ್ಚಾಗಿ ಕಾಣಬರುತ್ತಿದೆ ಎನ್ನಬಹುದು.

ಸಂಶಯಗ್ರಸ್ಥರಾದ ಕೆಲವರು, ಪ್ರಾಣಿಗಳಿಗೂ ವಿವೇಚನಾ ಶಕ್ತಿ ಇದೆ ಎಂದು ವಾದಮಾಡುವುದನ್ನೂ ನಾವು ದುರಹಂಕಾರ ದಿಂದಲೂ ಅವಿಚಾರದಿಂದಲೂ ಪ್ರಾಣಿಗಳ ವಿಚಾರಶಕ್ತಿಯನ್ನು ಒಪ್ಪಿಕೊಳ್ಳುತಿಲ್ಲ ಎಂದು ಹೇಳುವುದನ್ನೂ ನೋಡಿದರೆ ಆಶ್ಚರ್ಯ ವಾಗುತ್ತದೆ.

ವಿಚಾರಶಕ್ತಿ ಅಥವಾ ಬುದ್ಧಿಶಕ್ತಿ ಇರುವುದಾದರೆ ಅದು ಜೀವನದ ಎಲ್ಲ ಘಟನೆಗಳಲ್ಲಿಯೂ, ನಡವಳಿಕೆಯಲ್ಲಿಯೂ ವ್ಯಕ್ತ ವಾಗಬೇಕು. ಆದರೆ ಪ್ರಾಣಿಗಳಲ್ಲಿ ಸಂರಕ್ಷಣೆ ಸಂತಾನಾಭಿ ವೃದ್ಧಿಗಳ ವಿನಾ ಉಳಿದ ಯಾವುದರಲ್ಲಿಯೂ ಈ ತೆರನಾದ ಬುದ್ಧಿಶಕ್ತಿ ಇರುವುದು ಕಾಣಬರವುದಿಲ್ಲ. ಹೀಗೆ ಇವುಗಳ ಬುದ್ಧಿಶಕ್ತಿಯ ವ್ಯಾಪ್ತಿ ಕಿರಿದಾಗಿದ್ದು, ಒಂದೆರಡು ವಿಷಯಗಳಲ್ಲಿ ಮಾತ್ರ ಅದು ಪ್ರಕಟವಾಗುತ್ತದೆ. ಅಲ್ಲದೆ ಸಹಜಪ್ರವೃತ್ತಿಗೆ ಒಳಗಾಗದ ವಿಷಯಗಳಲ್ಲಿ ಈ ಶಕ್ತಿ ಕಾಣಬರುವುದಿಲ್ಲ ಆದರೂ ಮನುಷ್ಯನಿಗೆ ಹೋಲಿಸದೆ ಪ್ರಾಣಿಗಳನ್ನೇ ತೆಗೆದುಕೊಂಡು ನೋಡಿದರೆ ಈ ಶಕ್ತಿ ತುಂಬ ಸೋಜಿಗವನ್ನುಂಟುಮಾಡುವುದಾ ಗಿದೆ. ಇದಕ್ಕೆ ಉದಾಹರಣೆಯಾಗಿ ಅನೇಕವೇಳೆ ನಾವು ನೋಡಿ ರುವ ಒಂದು ಸಂಗತಿಯನ್ನೇ ಇಲ್ಲಿ ಹೇಳಬಹುದು.

ಯಾವ ವಿಧವಾದ ಗಲಭೆ ಗೊಂದಲಗಳೂ ಇಲ್ಲದ ಜನ ರಹಿತವಾದ ಸ್ಥಳದಲ್ಲಿಯೇ ಗೂಡುಮಾಡಿಕೊಳ್ಳಲು ಕೋಳಿ

ಹೇಗೆ ಹವಣಿಸುತ್ತವೆ! ತಾನು ಕಾವುಕೂರಲು ಅನುಕೂಲವಾಗು ವಂತೆ ಮೊಟ್ಟೆಗಳನ್ನು ಇಟ್ಟಮೇಲೆ ಆ ಮೊಟ್ಟೆಗಳ ಮೇಲೆಲ್ಲ ಒಂದೇ ರೀತಿಯ ಶಾಖ ಬೀಳುವಂತೆ ಅವುಗಳನ್ನು ಪದೇಪದೇ ತಿರುಗಿಸಿಡುವುದರಲ್ಲಿ ಎಷ್ಟೊಂದು ಜಾಗರೂಕತೆ ವಹಿಸುತ್ತದೆ! ತನ್ನ ಆಹಾರಾರ್ಥವಾಗಿ ಮೊಟ್ಟೆಗಳನ್ನು ಬಿಟ್ಟು ಹೋಗಬೇಕಾಗಿ ಬಂದಾಗ ಪುನಃ ಹೇಗೆ ಮೊಟ್ಟೆಗಳು ತಣ್ಣಗಾಗುವುದರೊಳಗಾಗಿ ಕ್ಲಿಪ್ತಕಾಲದಲ್ಲಿ ಹಿಂದಿರುಗುತ್ತದೆ! ಬೇಸಿಗೆಯಲ್ಲಿ ಸ್ವಲ್ಪ ಹೆಚ್ಚಿನ ಸ್ವಾತಂತ್ರ್ಯ ವಹಿಸಿ ಒಟ್ಟಿಗೆ ಎರಡು ಗಂಟೆಗಳಿಗೂ ಮೇಲಾಗಿ ಮೊಟ್ಟೆಗಳನ್ನು ಬಿಟ್ಟಿರುವ ಕೋಳಿಗಳನ್ನು ನೀವು ನೋಡಿದೀರಿ. ಪ್ರಾಣಾಂತಕಸ್ವರೂಪವಾದ ಚಳಿಗಾಲದಲ್ಲಾದರೆ ಅದೇ ಕೋಳಿ ಕಾವುಕೂರುವುದರಲ್ಲಿ ಬಹಳ ಎಚ್ಚರಿಕೆ ವಹಿಸಿ ಮೊದಲಿನ ಕಾಲದ ಅರ್ಧದಷ್ಟು ಕಾಲ ಮಾತ್ರ ಮೊಟ್ಟೆಯಿಂದ ದೂರವಾಗಿರುತ್ತದೆ. ಮರಿ ಮೊಟ್ಟೆಯೊಡೆದು ಹೊರಗೆ ಬರುವ ವೇಳೆಯಲ್ಲಿ ತಾಯಿ ಎಷ್ಟೊಂದು ನಾಜೂಕಿನಿಂದಲೂ, ಎಚ್ಚರಿಕೆಯಿಂದಲೂ ಮರಿಗೆ ಸಹಾಯ ಮಾಡುತ್ತದೆ! ಹವಾಮಾನದ ಬಾಧೆಗಳಿಂದ ತೊಂದರೆ ಯಾಗದಂತೆ ನೋಡಿಕೊಳ್ಳುವುದನ್ನೂ ತಕ್ಕ ರೀತಿಯ ಆಹಾರಾದಿ ಗಳಿಂದ ಲಾಲನೆ ಮಾಡುವುದನ್ನೂ ಅದಕ್ಕೆ ಸ್ವಾವಲಂಬನ ಶಕ್ತಿ ಯನ್ನು ಕಲಿಸಿಕೊಡುವುದನ್ನೂ ಒಂದು ಗೊತ್ತಾದ ಗಡುವಿನಲ್ಲಿ ಮರಿ ಹೊರಗೆ ಬಾರದಿದ್ದರೆ ಆ ಗೂಡನ್ನು ತ್ಯಜಿಸಿ ಬಿಡುವುದನ್ನೂ ಇಲ್ಲಿ ಪ್ರತ್ಯೇಕವಾಗಿ ವಿವರಿಸಬೇಕಾಗಿಲ್ಲ. ಮೊಟ್ಟೆಯಿಡುವಲ್ಲಿಂದ ಹಿಡಿದು ಆ ಮೊಟ್ಟೆ ಒಡೆದು ಮರಿ ಹೊರಗೆ ಬರುವವರೆಗಿನ ಎಲ್ಲ ಕಾರ್ಯಕಲಾಪಗಳಲ್ಲಿಯೂ ತಾಯಿ ತೋರುವ ವ್ಯವಧಾನ ಕೌಶಲವೂ ಮುಂಜಾಗ್ರತೆಯ ರೀತಿಯೂ ಎಂತಹ ರಾಸಾಯನಿಕ ಪ್ರಯೋಗಮಂದಿರದಲ್ಲಿಯೂ ಕಾಣಲಾರದು. ಮೇಲೆ ಕಾಣಿಸಿದ

ವಿವರಗಳಲ್ಲಿಲ್ಲ ಇತರ ಕೆಲವು ಹಕ್ಕಿಗಳು ಇದಕ್ಕೂ ಹೆಚ್ಚಿನ ಜಾಣ್ಮೆಯನ್ನು ತೋರಿಸುತ್ತವೆಂದು ಬೇರೆ ಹೇಳಬೇಕಾಗಿಲ್ಲವಷ್ಟೆ.

ಸಂತಾನಾಭಿವೃದ್ಧಿಗೆ ಅತ್ಯಾವಶ್ಯಕವಾದ ಈ ತೋರಿಕೆಯ ಜಾಣತನವೆಲ್ಲ ಒಂದು ರೀತಿಯಲ್ಲಿ ಸ್ವಲ್ಪವೂ ವಿವೇಚನಾಯುತವಾದುದಾಗಲೀ ವ್ಯವಹಾರಜ್ಞಾನಯುಕ್ತವಾದುದಾಗಲೀ ಇರುವುದೆಂದು ಹೇಳಲಾಗುವುದಿಲ್ಲ. ಸೀಮೆಸುಣ್ಣದ ಒಂದು ತುಂಡನ್ನಿಟ್ಟರೂ ಅದನ್ನು ಮೊಟ್ಟೆಯೆಂದೇ ಭಾವಿಸಿ, ಕೋಳಿಯು ಮೊಟ್ಟೆಯ ಮೇಲೆ ಹೇಗೋ ಹಾಗೆ ಅದರ ಮೇಲೆಯೂ ಕಾವು ಕೂರುತ್ತದೆ. ತಾನು ಇಡುವ ಮೊಟ್ಟೆಗಳ ಸಂಖ್ಯೆಯಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೂ ಅದನ್ನು ತಿಳಿದುಕೊಳ್ಳುವ ಪರಿಜ್ಞಾನ ಕೋಳಿಗಿಲ್ಲ. ಅದಕ್ಕೆ ತನ್ನ ಮೊಟ್ಟೆಗಳಿಗೂ. ಇತರ ಹಕ್ಕಿಯ ಮೊಟ್ಟೆಗಳಿಗೂ ಇರುವ ವ್ಯತ್ಯಾಸ ಕೂಡ ಗೊತ್ತಾಗುವುದಿಲ್ಲ. ಮರಿಯಾದ ಮೇಲೆ ಕೂಡ ತನ್ನ ಮರಿಗಳ ಹಾಗೆಯೇ ಬೇರೆ ಜಾತಿಯ ಮರಿಗಳನ್ನೂ ನೋಡಿಕೊಳ್ಳುತ್ತದೆ. ತನ್ನ ಮತ್ತು ತನ್ನ ಸಂತತಿಯ ಪ್ರಾಣಧಾರಣ ವಿಚಾರವೊಂದರ ವಿನಾ ಉಳಿದೆಲ್ಲ ವಿಚಾರಗಳಲ್ಲಿಯೂ ಈ ಪ್ರಾಣಿ 'ಮೌಢ್ಯದ ಮುದ್ದೆ' ಎನ್ನಬಹುದು.

ಒಮ್ಮೊಮ್ಮೆ ವಿಚಾರಶಕ್ತಿಯನ್ನು ಮೀರಿಸಿದಂತೆ ತೋರುವ, ಒಮ್ಮೊಮ್ಮೆ ವಿಚಾರಶಕ್ತಿಗಿಂತ ತೀರ ಕೀಳಾಗಿರುವಂತೆ ತೋರುವ, ಈ ತೆರನಾದ ಸಹಜಪ್ರವೃತ್ತಿಗಿಂತಲೂ ಆಶ್ಚರ್ಯಕರವಾದುದು ಸೃಷ್ಟಿರಹಸ್ಯದಲ್ಲಿಯೇ ಬೇರಾವುದೂ ಇಲ್ಲವೆಂದು ನನಗೆ ತೋರುತ್ತದೆ. ಈ ಪ್ರವೃತ್ತಿ ದೇಹವೈಲಕ್ಷಣ್ಯದ ಪರಿಣಾಮವಲ್ಲ. ಚಿತ್ರವಿಚಿತ್ರವಾಗಿ ಕೆಲಸಮಾಡುವುದರಿಂದ ಇದು ವಿವೇಚನಾಶಕ್ತಿಯ ಪರಿಣಾಮವೆನ್ನುವಂತೆಯೂ ಇಲ್ಲ.

ಈ ಸಹಜಪ್ರವೃತ್ತಿ ವಸ್ತುಗಳಲ್ಲಿರುವ ಆಕರ್ಷಣಶಕ್ತಿಯಂತೆ ಕೇವಲ ಜಗನ್ನಿಯಾಮಕನ ಲೀಲಾವಿಭೂತಿಯಾಗಿದೆಯೇ ಹೊರತು ಯಾವ ದೈಹಿಕ ವ್ಯಾಪಾರದ ಫಲವಾಗಲೀ ಯಾಂತ್ರಿಕ ನಿಯಮದ ಫಲವಾಗಲಿ ಆಗಿಲ್ಲವೆಂದು ನನಗೆ ತೋರುತ್ತದೆ.

೨

ಈ ದಿನ ಬೆಳಗ್ಗೆ ನನ್ನ ಸ್ನೇಹಿತನ ಮನೆಯ ಅಂಗಳದಲ್ಲಿ ಹಾಗೆಯೇ ಅಡ್ಡಾಡುತ್ತಿದ್ದಾಗ ಪ್ರಾಣಿಗಳಲ್ಲಿ ಸಹಜಪ್ರವೃತ್ತಿ ಹೇಗೆ ಕೆಲಸಮಾಡುತ್ತದೆ ಎನ್ನುವದನ್ನು ಕಣ್ಣಾರೆ ಕಂಡು ಮಹದಾಶ್ಚರ್ಯವಾಯಿತು. ಒಂದು ಕೋಳಿಯ ಹಿಂದೆ ಹಿಂಡು ಹಿಂಡಾಗಿ ಹಲವಾರು ಬಾತಿನ ಮರಿಗಳು ಬರುತ್ತಿದ್ದವು. ಮರಿಗಳು ಒಂದು ಸಣ್ಣ ನೀರಿನ ಹೊಂಡವನ್ನು ಕಂಡಕೂಡಲೆ ನೀರಿಗೆ ಬಿದ್ದವು. ಆದರೆ ಅವುಗಳ ಮಲತಾಯಿಯಾದ ಕೋಳಿ ಮಾತ್ರ ಆ ನೀರಿನ ಹೊಂಡ ತೀರ ಭಯಂಕರವೂ ವಿನಾಶಕಾರಕವೂ ಆದದ್ದೆಂದು ಭಾವಿಸಿ ಅದರ ಒಳಕ್ಕೆ ಬೀಳಕೂಡದೆಂಬಂತೆ ಆ ಮರಿಗಳನ್ನು ಹಿಂದಕ್ಕೆ ಕರೆಯುತ್ತ ದಡದಲ್ಲಿಯೆ ಅತ್ತಿಂದಿತ್ತ ಸುಳಿದಾಡುತ್ತಿತ್ತು. ಹೀಗೆ ಕೋಳಿಯಲ್ಲಿಯೂ ಬಾತಿನಲ್ಲಿಯೂ ಕಂಡುಬಂದ ಬೇರೆ ಬೇರೆ ಬುದ್ಧಿಶಕ್ತಿಯನ್ನು ವಿಚಾರಪ್ರಧಾನವಾದುದೆಂದು ಹೇಳಲಾರೆನಾಗಿ ಅದನ್ನು 'ಸಹಜಪ್ರವೃತಿ' ಎಂದು ಹೇಳಬೇಕಾಯಿತು. ಎಂದಮೇಲೆ ಈ 'ಸಹಜಪ್ರವೃತ್ತಿ' ನಮ್ಮ ಅರಿವಿಗೆ ನಿಲುಕದದು ಎಂದೂ ಹೇಳಿದಂತೆ ಆಯಿತು. ನನಗೇನೋ ಈ ಹಿಂದೆಯೇ ಹೇಳಿದಂತೆ ಎಲ್ಲವಸ್ತುಗಳಲ್ಲಿಯೂ ಕಾಣಬರುವ ಆಕರ್ಷಣಶಕ್ತಿಯಂತೆ ಈ ಶಕ್ತಿಯೂ ಭಗವಂತನ ನಿಯಮಾನುಸಾರವಾಗಿ ನಡೆಯುವಂತೆ ತೋರುತ್ತದೆ. ಆಧುನಿಕ ತತ್ವಶಾಸ್ತ್ರಜ್ಞ

ನೊಬ್ಬನು ತನ್ನ ಗ್ರಂಥವೊಂದರಲ್ಲಿ 'ಭಗವಂತನೇ ಪ್ರಾಣಿಗಳ ಅಂತರಾತ್ಮ' ಎಂಬ ಅರ್ಥಬರುವ ಲ್ಯಾಟಿನ್ ಸೂಕ್ತಿಯೊಂದನ್ನು ಉದ್ಧರಿಸಿದ್ದಾನೆ. ಜೇಲ್ ಎಂಬ ಇನ್ನೊಬ್ಬ ತತ್ವಜ್ಞಾನಿ ಈ ಸೂಕ್ತಿಯ ಅಭಿಪ್ರಾಯವನ್ನು ಸ್ಪಷ್ಟೀಕರಿಸಿ ಬರೆದಿದ್ದಾನೆ. ಯಾವುದು ತಮಗೆ ಒಳ್ಳೆಯ ಆಹಾರವೋ ಅದನ್ನೇ ಆರಿಸಿ ಕೊಂಡು ತಿನ್ನುವುದಕ್ಕೂ ಯಾವುದು ತಮಗೆ ಕೆಡಕು ಮಾಡುವುದೋ ಅದನ್ನು ಬಿಟ್ಟುಬಿಡುವುದಕ್ಕೂ ಮಾರ್ಗದರ್ಶನ ಮಾಡಿಕೊಡುವ ಈ ತೋರಿಕೆಯ ಜಾಣತನವನ್ನು ಏನೆಂದು ಕರೆಯಬಹುದೆಂದು ಯಾರುತಾನೇ ಹೇಳಬಲ್ಲರು? ಪ್ರಸವವಾಗಿ ಹೊರಗೆಬಂದ ಆಡಿನ ಮರಿ ಒಡನೆಯೇ ತಾನಾಗಿ ಹೋಗಿ ತಾಯಿಯ ಮೊಲೆ ಬಾಯಿಹಾಕುವುದೆಂದು ಸಿಸಿರೊ ಹೇಳು ತ್ತಾನೆ. ಏನಾದರೂ ಅನಾಹುತವಾಗಿ ಯಾರೂ ಕಂಡುಕೇಳದ ಅಮೆರಿಕಾ ಸಮುದ್ರದ ತೀರಪ್ರದೇಶದಲ್ಲಿ ನಾವಿಕರು ತಂಗ ಬೇಕಾಗಿ ಬಂದಾಗ ಅಲ್ಲಿಯ ಗಿಡಮರಗಳ ಹಣ್ಣುಗಳು ಎಷ್ಟೇ ಮೋಹಕವಾಗಿ ಕಂಡುಬಂದರೂ ಅವುಗಳಲ್ಲಿ ಹಕ್ಕಿಗಳು ಕುಕ್ಕಿರುವ ಕಲೆಗಳಿಲ್ಲದಿದ್ದರೆ ಆ ಹಣ್ಣುಗಳನ್ನು ಮುಟ್ಟುವ ಸಾಹಸಕ್ಕೆ ಕೂಡ ಹೋಗುವುದಿಲ್ಲವೆಂದೂ ಹಕ್ಕಿಗಳು ಕುಕ್ಕಿದ ಹಣ್ಣುಗಳನ್ನಾದರೆ ಹಿಂದು ಮುಂದು ನೋಡದೆ ನಿಶ್ಚಿಂತರಾಗಿ ತಿಂದುಬಿಡುತ್ತಾರೆ ಎಂದೂ ಡ್ಯಾಸಿಯರ್ ಎಂಬ ಸಮುದ್ರ ನಾವಿಕನು ಬರೆಯು ತ್ತಾನೆ.

ಪ್ರಾಣಿಗಳಲ್ಲಿ ವಿಚಾರಶಕ್ತಿಯ ಉದ್ಯೋಗವೊಂದನ್ನು ನಾವು ಕಾಣಲಾಗದಿದ್ದರೂ ನಮ್ಮಲ್ಲಿರುವ ಕೆಳಮಟ್ಟದ ಎಲ್ಲ ಕಾಮಕ್ರೋಧಾದಿಗಳೂ ಅತ್ಯಂತ ತೀವ್ರವೂ ಪರಿಣಾಮವೂ ಆದ ರೀತಿಯಲ್ಲಿ ಪ್ರಾಣಿಗಳಿರುವುದನ್ನು ನಾವು ಕಾಣಬಹುದು.

ಇನ್ನೊಂದು ಪ್ರಾಣಿಯನ್ನು ಕೊಂದು ತಿನ್ನುವ ಕ್ರೂರಮೃಗ ಪಕ್ಷಿಗಳಲ್ಲೆಲ್ಲ ಆಹಾರಾನ್ವೇಷಣೆಗೆ ಪ್ರಚೋದನಕಾರಿಯಾಗಿ ನಿಲ್ಲುವ ಕೋಪ, ಈರ್ಷ್ಯೆ, ಪ್ರತೀಕಾರೇಚ್ಛೆ ಮುಂತಾದ ತಾಮಸಗುಣಗಳೇ ಪ್ರಬಲವಾಗಿರುತ್ತವೆ. ತಮ್ಮನ್ನು ತಾವೇ ಸಂರಕ್ಷಿಸಿಕೊಳ್ಳಲಾರದ ಅಥವಾ ಇನ್ನೊಬ್ಬರನ್ನು ಪೀಡಿಸಲಾರದ ಅಥವಾ ಓಡಿಹೋಗುವುದರಲ್ಲಿಯೇ ತಮ್ಮ ರಕ್ಷಣೆಯನ್ನು ಕಂಡುಕೊಂಡಿರುವ ಪ್ರಾಣಿಗಳಲ್ಲೆಲ್ಲ ತಾವು ಕಾಣುವ ಮತ್ತು ಕೇಳುವ ಎಲ್ಲ ವಿಷಯದಲ್ಲಿಯೂ ಭಯ, ಅನುಮಾನ, ಅಂಜಿಕೆ ಮುಂತಾದ ಗುಣಗಳೇ ವಿಶೇಷವಾಗಿರುತ್ತವೆ. ಮನುಷ್ಯನ ಸಹಾಯಕ್ಕೂ, ಉಪಯೋಗಕ್ಕೂ ಒದಗಿಬರುವ ಇತರ ಪ್ರಾಣಿಗಳಲ್ಲಿ ರೂಕ್ಷವಾದ ಸ್ವಭಾವವು ಕೊಂಚ ಪಳಗಿದಂತಾಗಿ ಸಾಧುತ್ವ, ಸೌಮ್ಯತೆ ಮೊದಲಾದ ಗುಣಗಳು ಕಾಣಬರುತ್ತವೆ. ಈ ಕಾರಣದಿಂದಲೇ ಈ ಜಾತಿಯವು ಮನೆಯಲ್ಲಿ ಸಾಕುಪ್ರಾಣಿಗಳಾಗಿರಲು ಅರ್ಹವಾಗಿರುತ್ತವೆ. ಸಾಮಾನ್ಯವಾಗಿ ಒಂದೊಂದು ಪ್ರಾಣಿಯಲ್ಲಿಯೂ ರಾಗದ್ವೇಷಾದಿ ಭಾವನೆಗಳು ಆದರದರ ದೇಹರಚನೆಗೆ ಅನುಗುಣವಾಗಿರುತ್ತವೆ ಎನ್ನಬಹುದು.

ತನ್ನನ್ನು ತಾನು ರಕ್ಷಿಸಿಕೊಳ್ಳಲಾರದಷ್ಟು ದುರ್ಬಲವಾದ ಆಡಿನ ಮರಿಯಲ್ಲಿ ಸಿಂಹದ ರೋಷಾವೇಶವು ಕಾಣಬರುವುದಿಲ್ಲ. ಹಾಗೆಯೇ ಸಿಂಹದಂತೆ ಕಾದಾಡುವುದಕ್ಕೂ, ಮೇಲೆ ಬೀಳುವುದಕ್ಕೂ ಅನುಕೂಲವಾದ ಆಯುಧಸದೃಶವಾದ ಅಂಗಾಂಗಗಳನ್ನುಳ್ಳ ಪ್ರಾಣಿಯಲ್ಲಿ ಕುರಿಯ ಹೇಡಿತನ ಕಾಣಬರುವುದಿಲ್ಲ. ಇದೇ ರೀತಿಯಲ್ಲಿ ಕೆಲವೊಂದು ಪ್ರಾಣಿಗಳಲ್ಲಿ ಯಾವ ಯಾವ ಇಂದ್ರಿಯಗಳ ಮೂಲಕ ತಮಗೆ ಹೆಚ್ಚಿನ ಅನುಕೂಲವಾಗಿ ಪ್ರಾಣರಕ್ಷಣೆ ಸಂಗೋಪನೆಗಳು ಸುಲಲಿತವಾಗಿ ನಡೆಯುವುದೋ

ಆ ಆ ಇಂದ್ರಿಯಗಳೇ ಚುರುಕಾಗಿಯೂ ಜಾಗೃತವಾಗಿಯೂ ಇರುತ್ತವೆ.

ಇಷ್ಟೇಅಲ್ಲ, ಒಂದೊಂದು ಪ್ರಾಣಿಯಲ್ಲಿಯೂ ಒಂದೊಂದು ರೀತಿಯ ಆತ್ಮಸಂರಕ್ಷಣೆಯ ಆಯುಧದಂತಿರುವ ಅಂಗ ವಿಶೇಷಗಳನ್ನೂ ಗಮನಿಸಬೇಕು. ಉಗುರು, ಗೊರಸು, ಕೊಂಬು, ಹಲ್ಲು, ಕೋರೆದಾಡೆ, ಬಾಲ, ಕೊಂಡಿ, ಸೊಂಡಿಲು. ಹೀಗೆ ಹಲವಾರು ಬಗೆಬಗೆಯ ಸಾಧನಗಳಿವೆ. ಹಾಗೆಯೇ ಆತ್ಮರಕ್ಷಣೆಗೆ ಈ ಬಗೆಬಗೆಯ ಆಯುಧಗಳಲ್ಲಿ ತಮಗೆ ಯಾವುದು ಹೆಚ್ಚು ಉಪಯುಕ್ತವೋ ಅದನ್ನು ಹೆಚ್ಚು ಅನುಕೂಲವಾದ ರೀತಿಯಲ್ಲಿ ಉಪಯೋಗಿಸುವ ವಿಧಾನವನ್ನು ನೋಡಿದರೂ ಕೂಡ ನಮ್ಮ ನಾವು ಯಾವುದನ್ನು ವಿಚಾರಶಕ್ತಿ ಎಂದು ಕರೆಯುತ್ತೇವೆಯೋ ಅದರಿಂದ ತೀರ ಭಿನ್ನವಾದ ಒಂದು ನಿಗೂಢವಾದ ತತ್ತ್ವವಾಗಿದೆ ಎಂದು ಅನೇಕ ಪ್ರಕೃತಿ ವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ. ತನ್ನ ಸಂರಕ್ಷಣ ಸಾಧನವು ಹುಟ್ಟಿಬೆಳೆಯುವುದಕ್ಕೆ ಮೊದಲೇ ಪ್ರಾಣಿಗಳು ಅವು ಹುಟ್ಟುವ ಸ್ಥಳಗಳಿಂದಲೇ ಶತ್ರುಗಳನ್ನು ಎದುರಿಸಹೋಗುವುದು ಕಂಡುಬರುತ್ತದೆ. ಮೇಕೆ, ಹೋರಿಗರು ಮೊದಲಾದುವುಗಳನ್ನು ಮನೆಯ ಒಳಗಡೆಯಲ್ಲಿಯೇ ಸಾಕಿದರೂ ಅವು ತಮ್ಮ ಜಾತಿಯ ಇತರ ಹಿರಿಯ ಪ್ರಾಣಿಗಳು ಹೇಗೆ ತಮ್ಮ ತಮ್ಮ ಆಯುಧ ಸಾಧನಗಳನ್ನು ಉಪಯೋಗಿಸುತ್ತವೆ ಎನ್ನುವುದನ್ನು ನೋಡಿ ಅರಿಯಲು ಅವಕಾಶಕೊಡದಿದ್ದರೂ ಆ ಮರಿಗಳು ಕೊಂಬು ಹುಟ್ಟುವ ಮೊದಲೇ ತಲೆಯಿಂದ ತಿವಿಯುವುದನ್ನು ನಾವೆಲ್ಲ ನೋಡಿದ್ದೇವೆ.

ಪ್ರಾಣಿ ಸಮೂಹದಲ್ಲೆಲ್ಲ ಅತ್ಯಂತ ಅಧಮವೂ, ಕ್ಷುದ್ರವೂ ಆದ ಸ್ನಾಯ್ವಾಂಗ ಜೀವಿಗಳಾದ ವೃಕ್ಷಾಂಗಿಗಳಲ್ಲಿ ಕೂಡ ಭಗ

ವೃತ್ತಿ ಪ್ರೇರಣೆಯ ಸಹಜಶಕ್ತಿಯ ನಿದರ್ಶನವನ್ನು ಕಾಣಬಹುದೆಂದು ಹೇಳಿದ ಲಾಕ್ ಎಂಬ ಆಂಗ್ಲ ತತ್ವಜ್ಞನ ಮಾತುಗಳನ್ನಿಲ್ಲಿ ಉದಾಹರಿಸುತ್ತೇನೆ. ‘ಆಯ್‌ಸ್ಟರ್’ ಅಥವ ‘ಕಾಕಲ್’ ಎಂಬ ಮೃದ್ವಂಗಿ ಪ್ರಾಣಿವಿಶೇಷಕ್ಕೆ ಇತರ ಪ್ರಾಣಿಗಳಿಗೆ ಅಥವಾ ಮನುಷ್ಯನಿಗೆ ಇರುವಂತೆ ಇಂದ್ರಿಯಗಳು ಹಲವಿಲ್ಲ. ಇರುವವು ಕೂಡ ಪಟುವಾಗಿಲ್ಲ. ಒಂದು ವೇಳೆ ಇದ್ದಿದ್ದರೂ ಒಂದು ಕಡೆಯಿಂದ ಇನ್ನೊಂದು ಕಡೆಗೆ ಚಲಿಸಲೂ ಆಗದ ಅವಕ್ಕೆ ಅದರಿಂದ ಪ್ರಯೋಜನವೂ ಅಷ್ಟಾಗಿ ಇರುತ್ತಿರಲಿಲ್ಲ. ಒಳ್ಳೆಯದಿರಲಿ, ಕೆಟ್ಟದ್ದಿರಲಿ ಬಳಿಯ ವಸ್ತುವಿನಿಂದ ದೂರವಾಗಿ ಚಲಿಸಿ ಹೋಗಲಾರದ ಪ್ರಾಣಿಗೆ, ಕಾಣುವ ಅಥವಾ ಕೇಳುವ ಇಂದ್ರಿಯಗಳಿದ್ದೇನು ಪ್ರಯೋಜನ? ಹಾಗೆಯೇ ಎಲ್ಲಿ ಇದ್ದರೆ ಅಲ್ಲಿಯೇ ಬಿದ್ದುಕೊಂಡು ಬೆಚ್ಚನೆಯ ನೀರೋ, ತಣ್ಣನೆಯ ನೀರೋ, ಕೊಳಕು ನೀರೋ, ತಿಳಿ ನೀರೋ ಹರಿದು ಬಂದದ್ದನ್ನು ಕುಡಿದುಕೊಂಡು ಇರಬೇಕಾದ ಈ ಜಾತಿಯ ಪ್ರಾಣಿಗಳಿಗೆ ಇಂದ್ರಿಯಪಟುತ್ವವೂ ಒಂದು ತೊಂದರೆಯಾದೀತಲ್ಲವೆ?

ಲಾಕ್ ಮಹಾಶಯನ ಈ ಉದಾಹರಣೆಯ ಜೊತೆಗೆ ಕಾರ್‌ಡಾನ್ ಎಂಬ ಇಟಲಿಯ ತಾತ್ವಿಕನಿಂದ ತೆಗೆದುಕೊಂಡಿರುವ ಡಾ. ಮೋರ್ ಎಂಬ ಆಂಗ್ಲ ವಿಜ್ಞಾನಿಯ ಪುಸ್ತಕದಲ್ಲಿ ಬರುವ ಇನ್ನೊಂದು ಜೀವಿಯ ಉದಾಹರಣೆಯನ್ನು ಕೊಡುತ್ತೇನೆ. ಇದು ಇನ್ನೊಂದು ರೀತಿಯ ನ್ಯೂನಾಂಗ ಜೀವಿ. ಈ ಜೀವಿಯ ನ್ಯೂನಾಂಗ ರಚನೆಯಲ್ಲಿಯೇ ಭಗವಂತನ ಸೃಷ್ಟಿ ವೈಚಿತ್ರ್ಯದ ಮಹಿಮೆ ಮನವರಿಕೆಯಾಗುವಂತಿದೆ. ಮುಖಮುಲ್ ಹೆಗ್ಗಣ ಎಂದರೆ ಯಾರಿಗೆ ಗೊತ್ತಿಲ್ಲ! ಆದರೆ ಭಗವಂತನ ಅಸ್ತಿತ್ವಕ್ಕೆ ಇದಕ್ಕೂ ಸ್ಪಷ್ಟವಾದ ಋಜುವಾತು ಬೇರೆ ಯಾವುದಿದೆ! ಈ

ಹೆಗ್ಗಣದ ಅಂಗಾಂಗಗಳು ಅದರ ಜೀವನ ವ್ಯಾಪಾರಕ್ಕೆ ಅನು ಗುಣವಾಗಿವೆ. ಇದು ಬಿಲವಾಸಿಯಾದ ಪ್ರಾಣಿಯಾದುದರಿಂದ ದೇವರು ಇದಕ್ಕೆ ತೀರ ಚಿಕ್ಕ ಪ್ರಮಾಣದ ಕಣ್ಣುಗಳನ್ನು ದಯ ಪಾಲಿಸಿದ್ದಾನೆ. ಪ್ರಕೃತಿ ವಿಜ್ಞಾನಿಗಳು ಇವಕ್ಕೆ ಕಣ್ಣೇ ಇಲ್ಲ ವೆಂದು ಚರ್ಚೆಮಾಡುವಷ್ಟರಮಟ್ಟಿಗೆ ಇದರ ಕಣ್ಣುಗಳು ಚಿಕ್ಕ ವಾಗಿವೆ. ಆದರೆ ಕಣ್ಣಿನ ಕೊರತೆಯನ್ನು ಹೋಗಲಾಡಿಸ ಲೆಂಬಂತೆ ಅಪಾಯದಿಂದ ಪಾರಾಗಲಿಕ್ಕೆ ತುಂಬ ಚುರುಕಾದ ಶ್ರವಣಶಕ್ತಿಯನ್ನು ಇದಕ್ಕೆ ದೇವರು ಕೊಟ್ಟಿದ್ದಾನೆ. ಇದರ ಶ್ರವಣಶಕ್ತಿ ತುಂಬ ಸೂಕ್ಷ್ಮ. ಆಮೇಲೆ ಇದಕ್ಕೆ ಎಂಥ ಚಿಕ್ಕ ಬಾಲ; ಚಿಕ್ಕ ಕಾಲುಗಳು! ಎಂಥ ಹರಿತವಾದ ಉಗುರುಗಳುಳ್ಳ ಅಗಲವಾದ ಹೆಜ್ಜೆಯ ಮುಂಗಾಲುಗಳು! ಯಾವ ಉದ್ದೇಶ ದಿಂದ ಇವುಗಳ ರಚನೆ ಹೀಗಿದೆ ಎನ್ನುವುದನ್ನು ನೋಡಿ ದೊಡನೆಯೇ ಹೇಳಬಹುದು. ಅಷ್ಟೊಂದು ಜಾಗ್ರತೆಯಾಗಿ ನೆಲನೊಳಕ್ಕೆ ಕೊರೆದುಕೊಂಡು ಹೋಗಿ ಅವಿತುಕೊಳ್ಳುವದನ್ನು ನೋಡಿದರೆ ಇದರ ಯಶಸ್ವೀ ಖನನಕ್ಕೆ ಯಾರಾದರೂ ಮೆಚ್ಚ ಬೇಕು. ತನ್ನ ದೇಹ ನೆಲನೊಳಕ್ಕೆ ಅಡಗಲು ಎಷ್ಟು ಆಳ ಬೇಕೋ ಅಷ್ಟು ಆಳವನ್ನು ತೋಡುವುದಕ್ಕೆ ಮಾತ್ರ ಸಾಕಾಗು ವಂತೆ ಗಿಡ್ಡವಾಗಿವೆ. ಅಂತೆಯೇ ಹಾಗೆ ತೋಡಿದ ಮಣ್ಣನ್ನು ಬೇಗ ಬೇಗ ಸರಾಗವಾಗಿ ಹೊರಗೆಸೆಯುವುದಕ್ಕೆ ಅನುಕೂಲವಾಗಿ ತಕ್ಕ ಪ್ರಮಾಣದಲ್ಲಿವೆ ಅದರ ಮುಂಗಾಲುಗಳು. ಅದರ ಬಾಲವೋ ಇದೆ ಅಂದರೆ ಇದೆ; ಇಲ್ಲ ಎಂದರೆ ಇಲ್ಲವೆನ್ನುವಂತೆ ಚಿಕ್ಕದಾಗಿದೆ. ಇಲಿ ಅಥವಾ ಹೆಗ್ಗಣಗಳ ಹಾಗೆ (ಆ ಜಾತಿಗೆ ಇದೂ ಸೇರಿದ್ದಷ್ಟೆ!) ಅದು ತನ್ನ ಬಾಲವನ್ನು ನೆಲದ ಮೇಲೆ ಎಳೆದುಕೊಂಡು ಹೋಗುವುದಿಲ್ಲ. ಅದು ಭೂಮಿಯ ಒಳಗಡೆ

ಇರುತ್ತದೆ ಮತ್ತು ಹಾಗೆ ಇರುವುದೇ ಅದಕ್ಕೆ ಹಿತ. ಅಲ್ಲದೆ ಹಿಂದುಗಡೆ ಉದ್ದವಾದ ಬಾಲವಿದ್ದಿದ್ದರೆ ತೊಂದರೆಯೂ ಹೆಚ್ಚು. ಗಾಳಿ ನೀರುಗಳಂತೆ ಸುಲಭವಾಗಿರದೆ ಗಟ್ಟಿಯಾಗಿರುವ ಮಣ್ಣಿನಲ್ಲಿ ಕಷ್ಟದಿಂದ ಕೊರೆದುಕೊಂಡು ಹೋಗಬೇಕಾಗಿರುವಾಗ ತನ್ನ ಹಿಂದೆ ದೊಡ್ಡಬಾಲವಿದ್ದರೆ ತಾನು ಅಡಗಿಕೊಳ್ಳುವ ಮೊದಲೇ ಶತ್ರುಗಳು ಸುಲಭವಾಗಿ ಹಿಂದಿನಿಂದ ಹಿಡಿದುಬಿಟ್ಟಾರು.

ನನಗೆ ನೆನಪಿರುವಂತೆ ಬಾಯಲ್ ಎಂಬಾತ ತನ್ನ ಗ್ರಂಥದಲ್ಲಿ ಎಲ್ಲಿಯೋ ಒಂದುಕಡೆ ಈ ಪ್ರಾಣಿ ಸಂಪೂರ್ಣವಾಗಿ ಕುರುಡಾಗಿಲ್ಲದಿದ್ದರೂ (ಜನಸಾಮಾನ್ಯರ ನಂಬಿಕೆಯಂತೆ ಇದಕ್ಕೆ ಕಣ್ಣೇ ಇಲ್ಲ!) ಎದುರಿಗಿರುವ ಪದಾರ್ಥಗಳನ್ನು ಸ್ಪಷ್ಟವಾಗಿ ಗುರುತಿಸುವಷ್ಟರ ದರ್ಶನಶಕ್ತಿ ಇದಕ್ಕಿಲ್ಲ ಎಂದು ಹೇಳಿರುವ ಮಾತನ್ನು ನಾನು ಇಲ್ಲಿ ಹೇಳದೆ ಇರಲಾರೆ. ಬೆಳಕಿನಲ್ಲಿ ಕಲ್ಪನೆ ಮಾತ್ರ ಆಗುವಂತಹ ಬೇರೆ ಯಾವುದರ ಪರಿಜ್ಞಾನವೂ ಆಗದಂತಹ ಒಂದು ತೆರನಾದ ರಸ ಅದರ ಕಣ್ಣಿನಲ್ಲಿ ಇರಬಹುದೆಂದು ಪ್ರತೀತಿ; ಮತ್ತು ಈ ಬೆಳಕಿನ ಕಲ್ಪನೆ ಕೂಡ ಅದಕ್ಕೆ ಸಂಕಟಕರವಾಗಬಹುದೆಂದು ಹೇಳಲಾಗಿದೆ.

ತನ್ನ ಬಿಲವನ್ನು ಬಿಟ್ಟು ನೆಲದ ಮೇಲಕ್ಕೆ ಬಂದಾಗಲೆಲ್ಲ ಅದರ ಕಣ್ಣಿನ ಎದುರಿಗೆ ಇಂತಹದೊಂದು ಬೆಳಕಿನ ಹೊಳಪು ಬೀಳದಿದ್ದರೆ ಅದಕ್ಕೆ ಏನಾದರೊಂದು ಅಪಾಯವೊದಗುವುದು ಶತಸಿದ್ಧವಾಗುತ್ತಿತ್ತು. ಈಗಲಾದರೆ ಬೆಳಕಿನ ಒಂದು ಸೂಕ್ಷ್ಮವಾದ ಅನುಭವ ಆದೊಡನೆಯೇ ಅದು ತಾನು ಅಪಾಯಕರವಾದ ಸ್ಥಳದಲ್ಲಿ ಇರುವುದಾಗಿ ತಿಳಿದು ಒಡನೆಯೇ ನೆಲದಲ್ಲಿ ತನಗೆ ಉಚಿತವಾದ ಬಿಲದಲ್ಲಿ ಹುದುಗಿಕೊಳ್ಳುವುದಕ್ಕೆ ಅನುಕೂಲವಾಗಿದೆ, ಹೀಗೆ ಈ ಪ್ರಾಣಿಗೆ ಕಣ್ಣೇ ಕಾಣದಿದ್ದರೆ ಗಂಡಾಂತರ ಕಾಣುವುದು ಅಪ್ರಯೋಜಕ!

ಪ್ರಾಣಿಗಳಲ್ಲೆಲ್ಲ ಹೆಚ್ಚು ನ್ಯೂನಾಂಗಗಳಿರುವ ಇಂತಹ ಪ್ರಾಣಿಗಳನ್ನೇ ನಾನು ಉದಾಹರಿಸಿದ್ದೇನೆ. ಇಂತಹ ಅಪೂರ್ಣವಾದ ನ್ಯೂನಜೀವಿಗಳಲ್ಲಿಯೇ ಇಷ್ಟೊಂದು ಆಶ್ಚರ್ಯಕರವಾದ ರೀತಿಯಲ್ಲಿ ದೈವಲೀಲೆಯು ಪ್ರಕಟವಾಗಿರುವುದಾದರೆ ದೇಹದ ಸಮಸ್ತ ಅಂಗಗಳೂ ಪೂರ್ಣವಾಗಿಯೂ, ಪಟುವಾಗಿಯೂ ಇರುವ ಲಕ್ಷೋಪಲಕ್ಷ ಇತರ ದೊಡ್ಡಪುಟ್ಟ ಪ್ರಾಣಿಗಳಲ್ಲಿ ಇನ್ನೆಷ್ಟರಮಟ್ಟಿಗೆ ಪ್ರಕಟವಾಗಿರಬೇಡ!

ನಮ್ಮ ರಾಯಲ್ ಸೊಸೈಟಿಯವರು, ಪುಸ್ತಕಗಳಿಂದಲೂ ಪ್ರತ್ಯಕ್ಷಾನುಭವಗಳಿಂದಲೂ ತಿಳಿಯಬರುವಂತಹ ಅತ್ಯುತ್ತಮವಾದ ವಿವರಗಳನ್ನೊಳಗೊಂಡ ಒಂದು ಬೃಹದ್ಗ್ರಂಥರಚನೆಗೆ ತೊಡಗಬಹುದೆಂದು ನನಗೆ ಎನಿಸುತ್ತಿದೆ. ನಮ್ಮ ರಾಯಲ್ ಸೊಸೈಟಿಯ ವಿಜ್ಞಾನಿಗಳಲ್ಲಿ ಒಬ್ಬೊಬ್ಬರೂ ತಾವು ಸಂಶೋಧನೆ ನಡೆಸಿದ ಪ್ರಾಣಿಯೊಂದರ ವಿಷಯವಾಗಿ ಅವರ ಮೂಲ, ಹುಟ್ಟು, ಬೆಳವಣಿಗೆ ತಿಳಿವುಗಳನ್ನೂ, ಅದರ ಜೀವನತತ್ತ್ವ, ಹಗೆತನ ಗೆಳೆತನಗಳನ್ನೂ ಕುರಿತ ಸುಸ್ಪಷ್ಟವೂ ಖಚಿತವೂ ಆದ ವಿವರಗಳನ್ನು ಕೊಡುವುದರ ಜೊತೆಗೆ ಅದರ ದೇಹ ಮತ್ತು ಮನಸ್ಸಿನ ಚಲನವಲನಗಳನ್ನೂ ಅದರ ನರನಾಳಗಳ ರಚನೆಗಳನ್ನೂ ಈ ರಚನೆಗೂ ಇತರ ಪ್ರಾಣಿಗಳ ರಚನೆಗೂ ಇರುವ ವ್ಯತ್ಯಾಸಗಳನ್ನೂ ಅದರ ಸುತ್ತಮುತ್ತಲ ಸನ್ನಿವೇಶವು ಅದರ ಮೇಲೆ ಮೂಡಿಸಿರುವ ಪ್ರಭಾವ ಅದರ ಪರಿಣಾಮ ಇವುಗಳನ್ನೂ ಅಂದವಾಗಿ ಹೇಳಿದ್ದೇ ಆದರೆ ಮನುಜಕುಲಕ್ಕೆ ಅವರು ತಮ್ಮ ಅಭ್ಯಾಸದಿಂದ ಅತ್ಯಮೂಲ್ಯವಾದ ಸೇವೆಯನ್ನು ಸಲ್ಲಿಸಿದಂತೆ ಆಗುತ್ತದೆ; ಮಾತ್ರವಲ್ಲ, ಸರ್ವಶಕ್ತನಾದ ಕರ್ತಾರನ ಮಹಾಮಹಿಮೆಗಳನ್ನು ಕೊಂಡಾಡಿದ ಹಾಗೂ ಆಗುತ್ತದೆ.

ಎಂತೆಂತಹ ಪ್ರಾಜ್ಞರು ಬರೆದ ಬೃಹಲ್ಲೇಖನಗಳ ಸಮುಚ್ಚಯವಾದರೂ ಇಂತಹ ಪ್ರಕೃತಿ ವಿಜ್ಞಾನದ ಚರಿತ್ರೆ ತುಂಬ ಅಸಮಗ್ರವೂ, ದೋಷಯುಕ್ತವೂ ಆದ ಗ್ರಂಥವಾಗು ವ್ರವರಲ್ಲಿ ಸಂಶಯವಿಲ್ಲ. ಸಮುದ್ರವೂ ಮರಳ್ಗಾಡುಗಳೂ ಲಕ್ಷಾಂತರ ಜೀವಿಗಳನ್ನು ನಮ್ಮ ವೀಕ್ಷಣ ಲೋಕಕ್ಕೆ ಸಿಗದಂತೆ ಬಚ್ಚಿಟ್ಟುಕೊಂಡಿವೆ. ನಮ್ಮ ಅವಗಾಹನೆಗೆ ಅತೀತವಾದಂತೆ ಭಯಂಕರ ವನಾಂತರಗಳಲ್ಲಿಯೂ ಕಡಲಾಳದ ಪಾತಾಳಗಳ ಲ್ಲಿಯೂ ಲೆಕ್ಕವಿಲ್ಲದ ಯುಕ್ತಿ ಚಾತುರ್ಯವೂ ಸಂಚು ಹೊಂಚು ಗಳ ಉಪಾಯವೂ ದಿನದಿನವೂ ನಡೆಯುತ್ತದೆ. ಅಲ್ಲದೆ ಬರಿಯ ಕಣ್ಣಿಗೆ ಕಾಣುವ ಸಣ್ಣ ದೊಡ್ಡ ಪ್ರಾಣಿಗಳ ಜೊತೆಗೆ ಸೂಕ್ಷ್ಮ ದರ್ಶಕಯಂತ್ರದಿಂದ ನೋಡಬೇಕಾದ, ಬಹುಶಃ ಒಮ್ಮೊಮ್ಮೆ ಅವುಗಳಿಗೂ ಕಾಣಬರದ, ಎಷ್ಟೋ ಸಣ್ಣ ಸಣ್ಣ ಜೀವಜಂತುಗಳು ಈ ಪ್ರಪಂಚದಲ್ಲಿ ಅಸಂಖ್ಯಾತವಾಗಿವೆ. ಒಟ್ಟಿನಲ್ಲಿ ನಮ್ಮ ತಿಳಿ ವಳಿಕೆಯ ಎಲ್ಲೆಯೊಳಗೆ ಬಂದ ಪ್ರಾಣಿಗಳನ್ನೇ ಅಭ್ಯಾಸಮಾಡಿ ದುದರ ಪರಿಣಾಮವಾಗಿ ಇದೇ ವಿಧವಾದ ಬುದ್ಧಿವಂತಿಕೆಯೂ ಗುಣವಿಶೇಷವೂ ಪ್ರಾಣಿಕೋಟಿಯಲ್ಲೆಲ್ಲ ಉದ್ದಕ್ಕೂ ಕಾಣಬರು ತ್ತವೆಯೆಂದೂ ಈ ಬುದ್ಧಿವಂತಿಕೆಯೇ ಪ್ರತಿಯೊಂದು ಪ್ರಾಣಿ ಯನ್ನೂ ಅದರದರ ಸ್ಥಾನದಲ್ಲಿ ಭದ್ರವಾಗಿಟ್ಟು ಜೀವರಕ್ಷಣೆಗೆ ನೆರವಾಗುತ್ತದೆ ಎಂದೂ ಒಂದು ಸಿದ್ಧಾಂತಕ್ಕೆ ಬರಬಹುದು.

ದೇವತೆಗಳ ಸ್ವಭಾವವನ್ನು ಕುರಿತು ಹೇಳಿದ ತನ್ನ ಎರಡ ನೆಯ ಪುಸ್ತಕದಲ್ಲಿ ಸಿಸಿರೊ ಈ ಪ್ರಕೃತಿವಿಜ್ಞಾನದ ವಿಷಯ ವನ್ನು ತುಂಬ ಸೊಗಸಾಗಿ ಬರೆದಿದಾನೆ. ಸಾಮಾನ್ಯ ದರ್ಜೆಯ ಬರಹಗಾರನು ಇಂತಹ ಘನವಾದ ವಿಷಯಗಳನ್ನು ಕುರಿತು ಬರೆ ದರೆ ಜನರು ಕುಚೋದ್ಯಮಾಡಿ, ಗೇಲಿಮಾಡಿ, ತಮ್ಮ ಅನಾದರ

ವನ್ನು ತೋರಿಸುತ್ತಾರಷ್ಟೆ! ಸಿಸಿರೋ ಬರೆದ ಬರವಣಿಗೆಗೆ ಈ ಮಾತು ಅನ್ವಯಿಸುವುದಿಲ್ಲ. ಕುಚೋದ್ಯ ಲೇವಡಿಗಳಿಗೆ ಎಟುಕದಂತಹ ಮಹೋನ್ನತವಾದ ಆಲಂಕಾರಿಕ ಭಾಷೆಯಲ್ಲಿ ಆತನ ಪುಸ್ತಕ ಹೊರಬಂದಿದೆ.

# ಆಲಿವರ್ ಗೋಲ್ಡ್‌ಸ್ಮಿತ್

## ನಡುರಾತ್ರಿಯಲ್ಲಿ ನಗರ ಸಂಚಾರ

ಗಡಿಯಾರ ಈಗ ತಾನೆ ಎರಡು ಗಂಟೆ ಹೊಡೆಯಿತು. ನಂದಿಹೋಗುವ ಮುಂಬತ್ತಿಯ ಕಳಿಕೆ ಪಕಪಕನೆ ಹೊಯ್ದಾಡುತ್ತಿದೆ. ಕಾವಲುಗಾರ ಹೊತ್ತು ಮರೆತು ಮಲಗಿದಾನೆ. ಶ್ರಮಜೀವರೂ ಸಂತುಷ್ಟರೂ ವಿಶ್ರಾಂತರಾಗಿದಾರೆ. ಧ್ಯಾನಶೀಲರೂ ಅಪರಾಧಿಗಳೂ, ಪಾನವಿಲಾಸಿಗಳೂ, ಭಗ್ನಹೃದಯರೂ ಹೊರತಾಗಿ ಉಳಿದೆಲ್ಲರೂ ಗಾಢ ನಿದ್ರೆಯಲ್ಲಿ ವಿಲೀನರಾಗಿದಾರೆ. ಕುಡುಕನು ಮತ್ತೊಮ್ಮೆ ವಿನಾಶಕಾರಕವಾದ ಮಧುಪಾತ್ರೆಯನ್ನು ತುಂಬುತ್ತಿದಾನೆ. ದರೋಡೆಕಾರನು ತನ್ನ ನಡುರಾತ್ರೆಯ ಸಂಚಾರದಲ್ಲಿ ನಿರತನಾಗಿದಾನೆ. ಆತ್ಮಹತ್ಯಾಕಾರಿಯು ಪವಿತ್ರವಾದ ತನ್ನ ದೇಹದ ಮೇಲೆಯೆ ನಿಷ್ಠುರವಾದ ಕೈಯೆತ್ತಿದಾನೆ.

ಗತಕಾಲದ ಇತಿಹಾಸದಲ್ಲಿಯಾಗಲೀ ಸಮಕಾಲೀನರ ಕಲ್ಪನಾವಿಹಾರಗಳಲ್ಲಿಯಾಗಲೀ ಇನ್ನು ಹೆಚ್ಚು ಹೊತ್ತು ಕಳೆಯದೆ ಒಂಟಿಯಾಗಿ ನಗರ ಪರಿಭ್ರಮಣಕ್ಕೆ ಹೊರಡೋಣ. ಸ್ವಲ್ಪ ಹೊತ್ತಿಗೆ ಮುಂಚೆ ನನ್ನ ಕಣ್ಣಮುಂದೆಯೇ ನಿತ್ಯಚಂಚಲೆಯೂ ವೃಥಾಭಿಮಾನ ರೂಪಿಣಿಯೂ ಆದ ಮಾನವ ಮಹಾಮಾಯೆ ಎಲ್ಲಿ ಸುಳಿದಾಡಿದಳೋ ಎಲ್ಲಿ ವಿಲೋಕನೋತ್ಸವೆಯಾಗಿ ಮೆರೆದಳೋ ಮತ್ತೆಲ್ಲಿ ತನ್ನ ದುರಾಗ್ರಹದಲ್ಲಿಯೆ ಸೊಲ್ಲಡಗಿ ಉರುಳುವ ತುಂಟ ಮಗುವಿನಂತೆ ನಿಶ್ಶಬ್ದೆಯಾಗಿ ಮೈಗರೆದಳೋ ಅಲ್ಲಿಗೊಮ್ಮೆ ಒಂಟಿಯಾಗಿ ತೆರಳೋಣ.

ಸುತ್ತಲೂ ಇದೆಂತಹ ವಿಷಣ್ಣಾವಲೋಕನ! ನಂದಿ

ಹೋಗುವ ದೀಪ ಕ್ಷೀಣವಾದ ಹಳದಿಯ ಬಣ್ಣದ ಕ್ಷಣಿಕ ಪ್ರಭೆಯನ್ನು ಬೀರುತ್ತಿದೆ. ದೂರದಲ್ಲಿ ಕೇಳುವ ಗಡಿಯಾರದ ಘಂಟೆಯಲ್ಲದೆ, ಕಾವಲುನಾಯಿಯು ಬೊಗಳುವ ಶಬ್ದವಲ್ಲದೆ, ಬೇರೆ ಯಾವ ಸದ್ದೂ ಇಲ್ಲ. ಮಾನವನ ಸ್ವಪ್ರತಿಷ್ಠೆಯು ಸಮಸ್ತ ಸಡಗರವೂ ವಿಸ್ಮೃತಿಯಲ್ಲಿ ವಿಲೀನವಾಗಿದೆ. ಇಂತಹ ಹೊತ್ತಿನಲ್ಲಿ ಮಾನವನ ದುರಭಿಮಾನವು ಎಷ್ಟು ಪೊಳ್ಳಾದುದು ಎನ್ನುವುದು ಚೆನ್ನಾಗಿ ವ್ಯಕ್ತವಾಗುತ್ತದೆ.

ಈ ತಾತ್ಕಾಲಿಕ ವಿಜನತೆ ಚಿರಕಾಲಿಕವಾಗುವ ಕಾಲವೂ ಬಂದೇ ಬರುವುದು. ನಗರಕ್ಕೆ ನಗರವೇ ಅದರ ನಿವಾಸಿಗಳಂತೆ ಹೆಸರಳಿಸಿ ಹೋಗಿ ಮರುಭೂಮಿಯಾಗಿ ಬಿಡಬಹುದು.

ಇದರಷ್ಟೇ ದೊಡ್ಡದಾಗಿದ್ದ ಎಂತೆಂತಹ ನಗರಗಳು ಹಿಂದೆ ಪ್ರಸಿದ್ಧಿಗೆ ಬಂದಿದ್ದವು. ಹೀಗೆಯೇ ಜಯಪ್ರದವಾಗಿ ಹೀಗೆಯೇ ಎಲ್ಲೆ ಇಲ್ಲದ ಸಂತೋಷದಲ್ಲಿ ಮುಳುಗಿ ಆ ದೂರ ದೃಷ್ಟಿಯ ದುರಭಿಮಾನದಲ್ಲಿ ಬೀಗಿ ಶಾಶ್ವತವೆಂಬಂತೆ ಮೆರೆದವು! ಮುಂದಿನ ಸಂತತಿಯವರು ಕೆಲವು ಉಳಿಕೆಗಳನ್ನು ಮಾತ್ರ ಕಷ್ಟದಿಂದ ಗುರುತಿಸಬಹುದು. ಖಿನ್ನಮನಸ್ಕನಾದ ಪ್ರವಾಸಿಯು ಘೋರತರವಾದ ಪಾಳುಬೀಳುಗಳಲ್ಲಿ ಅಲೆಯುತ್ತ ಸುತ್ತಲೂ ದೃಷ್ಟಿಸಿ ನೋಡುತ್ತಾನೆ. ನೋಡುತ್ತ ಹೋದಂತೆ ಬುದ್ಧಿವಂತನಾಗುತ್ತಾನೆ. ಐಹಿಕ ವ್ಯಾಪಾರಿಗಳ ಕ್ಷಣಭಂಗುರತೆಯನ್ನು ಮನಗಾಣುತ್ತಾನೆ.

ಹೀಗೆಂದು ಆ ಪ್ರವಾಸಿಯು ಗೋಳಿಡುತ್ತಾನೆ: ಈಗ ಹಳು ಬೆಳೆದಿರುವ ಈ ಸ್ಥಳದಲ್ಲಿ ಅವರ ಕೋಟೆ ಕೊತ್ತಳವಿತ್ತು. ಈಗ ಅಪಾಯಕಾರಕಗಳಾದ ವಿಷಜಂತುಗಳ ಆವಾಸಸ್ಥಾನವಾಗಿರುವ ಈ ನಿವೇಶನದಲ್ಲಿ ಅವರ ಕಾಲದ ಶಾಸನ ಸಭೆ ಇತ್ತು.

ಗುಡಿಗೋಪುರಗಳೂನಾಟಕ ಮಂದಿರಗಳೂ ಇದ್ದ ಈ ತಾಣ ಈಗ ಗುರುತಿಸಲಾರದ ಪಾಳಿನ ರಾಶಿಯಾಗಿ ಭೋಗ ಬುದ್ಧಿ ಯಿಂದಲೂ ದುರಾಸೆಯಿಂದಲೂ ಮೊದಲು ದುರ್ಬಲಗೊಂಡ ಕಾರಣದಿಂದ ಆ ನಗರಗಳು ಹಾಳಾಗಿಹೋದವು.

ಸರ್ಕಾರದ ಕೃಪಾಶ್ರಯವು ನಿಜವಾದ ಸಮಾಜ ಸೇವಾ ಸಕ್ತನಿಗೆ ದೊರೆಯುವ ಬದಲು ಮೋಜುಗಾರರಿಗೆ ಲಭಿಸಿತು. ಅವರ ಧನಕನಕಾದಿ ವಿಪುಳೈಶ್ವರ್ಯವು ದಾರಿಕಾರರಿಗೆ ಒಂದು ಆಕರ್ಷಣೆಯಾಯಿತು. ಮೊದಮೊದಲು ದಾಳಿಕಾರರು ಸೋತು ಹಿಂದಿರುಗಿದರೂ ಮತ್ತೆ ಮತ್ತೆ ಮೇಲೆ ಬಿದ್ದು ಹಟ ಸಾಧನೆಯಿಂದ ಗೆದ್ದು ಪುರರಕ್ಷರನ್ನು ನಾಮಾವಶೇಷರನ್ನಾಗಿ ಮಾಡಿದರು.

ಸ್ವಲ್ಪಹೊತ್ತಿಗೆ ಮುಂಚೆ ಜನಭರಿತವಾಗಿದ್ದ ಈ ಬೀದಿ ಗಳು ಈಗ ಹೇಗೆ ವಿರಳವಾಗಿವೆ! ಈ ವಿರಳ ಜನ ಕೂಡ ಹಗಲು ಹೊತ್ತಿನ ಮುಚ್ಚುಮರೆಯಿಲ್ಲದೆ ಹೇಗೆ ನಿರ್ಭೀತರಾಗಿ ವಿಷಯ ಲಂಪಟತೆಗಾಗಲಿ, ದೈನ್ಯಾವಸ್ಥೆಗಾಗಲಿ ನಾಚದೆ ತಿರುಗುತ್ತಿದ್ದಾರೆ!

ಧನಿಕರ ಮನೆಯ ಮುಂದೆ ಈ ನಿಷ್ಠುರಪ್ರಪಂಚವನ್ನು ಮರೆತು ತುಸುಕಾಲವಾದರೂ ನಿದ್ದೆ ಹೋಗಲೆಂದು ಬೀದಿಯನ್ನೇ ಸುಪ್ಪತ್ತಿಗೆಯನ್ನಾಗಿ ಮಾಡಿ ಪವಡಿಸಿರುವ ಇವರು ಯಾರು? ಇವರು ಪರಿಹಾರಪಡೆಯಲೂ ಕೂಡ ಅಸಮರ್ಥರಾಗಿ ದಯಾ ದಾಕ್ಷಿಣ್ಯಗಳಿಗೆ ಕೂಡಾ ಮೀರಿದಂತಹ ಹೀನಸ್ಥಿತಿಯಲ್ಲಿ ಇರುವ ತಿರುಕರು, ಆಗಂತುಕರು, ಅನಾಥರು! ಕೆಲವರಿಗೆ ಮಾನ ಮುಚ್ಚಲು ಬಟ್ಟೆ ಚಿಂದಿ ಕೂಡ ಇಲ್ಲವಾಗಿದೆ. ಕೆಲವರಂತೂ ರೋಗರು ಜಿನಗಳಿಗೆ ತುತ್ತಾಗಿ ಕೃಶರಾಗಿದ್ದಾರೆ. ಲೋಕವೇ ಅವರನ್ನು ಬಹಿಷ್ಕರಿಸಿದೆ. ಸಮಾಜ ಅವರ ದುಃಖಗಳಿಗೆ ವಿಮುಖವಾಗಿ ಅವರನ್ನು ಹಸಿವು ಬಾಯಾರಿಕೆಗಳಿಗೆ ಗುರಿಮಾಡಿ ಅರೆಬತ್ತಲೆಯ

ಫಕೀರರನ್ನಾಗಿ ಮಾಡಿದೆ. ಇಲ್ಲಿ ನಡುಗುತ್ತಿರುವ ಈ ಬಡ ಹೆಂಗಸರು ಒಂದು ಕಾಲಕ್ಕೆ ಸುಖವಾಗಿದ್ದವರು. ಈಗ ಮಾಗಿಯ ಚಳಿಗಾಳಿಗಳಿಗೆ ನೂಕಲ್ಪಟ್ಟಿದ್ದಾರೆ. ಬಹುಶಃ ತಮ್ಮನ್ನು ಕೆಡಿಸಿದ ವಿಶ್ವಾಸಘಾತುಕರ ಮನೆಯ ಬಾಗಿಲ ಬಳಿ ಬಿದ್ದು ಆ ದಯಾವಿಹೀನರಾದ ನೀಚರಿಗೂ ನರಾಧಮರಾದ ಪ್ರೇಮಿಗಳಿಗೂ ಇವರು ಮೊರೆಯಿಡುತ್ತಿರಬಹುದು. ಆದರೇನು? ಇವರ ಮೊರೆ ನಿರರ್ಥಕ ತಾನೆ!

ಇಂತಹ ಮಂದಭಾಗ್ಯರ ಸಂಕಟವನ್ನು ನೀಗಲಾರದ ನಾನು ಮನುಷ್ಯನಾಗಿ ತಾನೆ ಏಕೆ ಹುಟ್ಟಿದೆ? ಲೋಕ ನನ್ನನ್ನು ಭರ್ತ್ಸನೆಗೈವುದಲ್ಲದೆ ಪರಿಹಾರ ನೀಡಲಾರದು. ದೊಡ್ಡ ಮನುಷ್ಯರ ಅತ್ಯಲ್ಪವಾದ ಸಂಕಟವನ್ನೂ ಹಣವಂತರ ತೀರ ಕಾಲ್ಪನಿಕವಾದ ದೇಹಾಲಸ್ಯವನ್ನೂ ಉತ್ಪ್ರೇಕ್ಷೆಮಾಡಿ ಹೇಳುವುದರಲ್ಲಿ ವಾಕ್ಚಾತುರ್ಯದ ಸರ್ವಶಕ್ತಿಯನ್ನೂ ವಿನಿಯೋಗಮಾಡುತ್ತೇವೆ. ನಮ್ಮ ಸಮಸ್ತ ಗಮನವೂ ಸಹಾನುಭೂತಿಯುಕ್ತವಾದ ಅನುಕಂಪೆಯೂ ಅತ್ತ ಕಡೆಗೆ ಓಡುತ್ತದೆ. ಪ್ರತಿಯೊಂದು ವಿಧವಾದ ರಾಕ್ಷಸ ಪ್ರವೃತ್ತಿಯು ಅಧಿಕಾರವರ್ಗದ ಉಪದ್ರವಕ್ಕೆ ತುತ್ತಾದ ಈ ಬಡವರ ರೋದನ ಅರಣ್ಯರೋದನ. ಉಳಿದವರ ಹಕ್ಕು ಬಾಧ್ಯತೆಗಳನ್ನು ಸಂರಕ್ಷಿಸುವ ಕಾನೂನು ಇವರಿಗೆ ವಿರೋಧವಾಗಿ ಪರಿಣಮಿಸುತ್ತದೆ

ಈ ನನ್ನ ಹೃದಯವು ಇಷ್ಟೊಂದು ಸಾನುಕ್ರೋಶಪರವಾಗಿರುವುದೇಕೆ? ಅಥವಾ ಈ ಸಾನುಕ್ರೋಶಪರತೆಗೆ ತಕ್ಕದಾಗಿ ನನ್ನ ಅದೃಷ್ಟವೇಕೆ ತುಂಬಿಬರಲಿಲ್ಲ? ಇಂತಹ ಸಂದರ್ಭಗಳಲ್ಲಿ ಪರಿಹಾರ ನೀಡಲು ಅಸಮರ್ಥನಾದ ದಯಾಪರತೆಯು ಪರಿಹಾರ ನೀಡೆಂದು ಕೇಳುವ ವ್ಯಕ್ತಿಗಿಂತಲೂ ಹೆಚ್ಚಿನ ದುರವಸ್ಥೆಗೆ ನನ್ನನ್ನು ಗುರಿಮಾಡುತ್ತದೆ.

# ಊರೂರು ತಿರುಗುವ ನಾಟ್ಯ ವಿಲಾಸಿಯ ಸಾಹಸಗಳು

ವಿನೋದವಾಗಿ ಹೊತ್ತು ಹೋಗುವುದಾದರೆ ಎಂತಹವರ ಸಹವಾಸವಾದರೂ ನನಗೆ ಇಷ್ಟವೇ; ಮೇಲಾಗಿ ಚಿಂದಿಯನ್ನು ಉಟ್ಟವನಾದರೂ ಸರಿಯೆ, ತಮಾಷೆಯಾಗಿ ಮಾತನಾಡುತ್ತಾನೆಂದರೆ ನನಗೆ ತುಂಬ ಪ್ರೀತಿ. ಕೆಲವು ದಿನಗಳ ಹಿಂದೆ ಜೊತೆಯವರೆಲ್ಲ ಊಟಕ್ಕೆ ಹೊರಟುಹೋದ ವೇಳೆಯಲ್ಲಿ ನಾನು ಸೈಂಟ್‌ಜೇಮ್ಸ್ ಪಾರ್ಕಿಗೆ ಹಾಗೆಯೇ ಆಡ್ಡಾಡಿಕೊಂಡು ಬರಲು ಹೋಗಿದ್ದೆ. ಪಾರ್ಕಿನಲ್ಲಿ ನಾಲ್ಕಾರು ಜನಮಾತ್ರ ಇದ್ದರು. ಆವರೂ ಕೂಡ ತಮ್ಮ ಹಸಿವಿಗೆ ಒಂದು ಹಿಡಿ ಹಿಟ್ಟು ದಕ್ಕಿಸಿಕೊಳ್ಳಲು ಕಾತರರಾಗಿದ್ದುದಕ್ಕಿಂತ ತಮಗೆ ಹಸಿವಾಗುತ್ತದೆ ಎನ್ನುವುದನ್ನೇ ಮರೆತುಬಿಡುವುದಕ್ಕೆ ಹೆಚ್ಚು ಕಾತರರಾಗಿದ್ದಂತೆ ಕಾಣುತ್ತಿದ್ದರು. ಅಲ್ಲಿಯೇ ಇದ್ದ ಬೆಂಚಿನ ಒಂದು ತುದಿಯಲ್ಲಿ ತುಂಬ ಕೊಳಕು ಬಟ್ಟೆಯಲ್ಲಿದ್ದ ಒಬ್ಬ ಬಡಪಾಯಿ ಸುಖಾಸೀನನಾಗಿದ್ದ! ಅದೇ ಬೆಂಚಿನ ಇನ್ನೊಂದು ತುದಿಯಲ್ಲಿ ನಾನು ಕುಳಿತುಕೊಂಡೆ.

ನಾವು ಅಂತಹ ಸಂದರ್ಭಗಳಲ್ಲಿ ಯಾವಾಗಲೂ ಮಾಡುವ ಹಾಗೆ ಸ್ವಲ್ಪ ನರಳಿ ಸ್ವಲ್ಪ ಕೆಮ್ಮಿ ಗಂಟಲು ಸರಿಪಡಿಸಿಕೊಂಡ ಬಳಿಕ, ಮೆತ್ತಗೆ ಒಬ್ಬರೊಡನೊಬ್ಬರು ಮಾತನಾಡುವ ಸಾಹಸ ಮಾಡಿದೆವು. 'ಕ್ಷಮಿಸಿ, ಸ್ವಾಮಿ, ನಿಮ್ಮನ್ನು ಎಲ್ಲಿಯೋ ನೋಡಿದ ಹಾಗಿದೆ, ನಿಮ್ಮ ಮುಖಪರಿಚಯ ನನಗೆ ಚನ್ನಾಗಿದೆ' ಎಂದು ನಾನು ಹೇಳಿದೆ. 'ಹೌದು, ಸ್ವಾಮಿ, ನನ್ನ ದೋಸ್ತಿಗಳು ಹೇಳುವಹಾಗೆ ನನ್ನ ಮುಖ ಹತ್ತಾರು ಜನರಿಗೆ ಪರಿಚಯವಿರುವ

ಮುಖ, ಪಳಗಿದ ಒಂಟೆ ನೋಡುವಹಾಗೆ, ಜೀವಸಹಿತ ಹಿಡಿದ ಮೊಸಳೆ ನೋಡುವಹಾಗೆ, ಜನರು ಇಂಗ್ಲೆಂಡಿನಲ್ಲಿ ನನ್ನನ್ನು ನೋಡಿದ್ದಾರೆ. ಸ್ವಾಮಿ, ಕಳೆದ ಹದಿನಾರು ವರುಷಗಳಿಂದ ಒಂದು ಗೊಂಬೆ ಆಟದ ಕಂಪನಿಯಲ್ಲಿ ಹನುಮನಾಯಕನಾಗಿದ್ದೆ. ಮೊನ್ನೆ ನಡೆದ ಜಾತ್ರೆಯಲ್ಲಿ ನಾನೂ ನನ್ನ ದಣಿಯೂ ಜಗಳ ಆಡಿಕೊಂಡು ಒಬ್ಬರಿಗೊಬ್ಬರು ಹೊಡೆದುಕೊಂಡು ಬೇರೆ ಬೇರೆ ಹೊರಟು ಬಂದೆವು. ಆತ ರೋಸ್‌ಮರಿ ಓಣಿಯಲ್ಲಿ ಪಿನ್‌ಕುಷನ್ ಮಾಡುವವರಿಗೆ ಗೊಂಬೆ ಮಾರುವುದಕ್ಕೆ ಹೋದ. ನಾನು ಸೈಂಟ್‌ಜೇಮ್ಸ್ ಪಾರ್ಕಿಗೆ ಉಪವಾಸ ಮಾಡುವುದಕ್ಕೆ ಬಂದೆ' ಎಂದು ಆತ ಹೇಳಿದನು.

"ನಿಮ್ಮಂತಹವರಿಗೂ ಈ ರೀತಿಯ ಕಷ್ಟಗಳು ಸಂಭವಿಸಿದ್ದನ್ನು ಕೇಳಿ ನನ್ನ ಮನಸ್ಸಿಗೆ ತುಂಬ ಸಂಕಟವಾಗಿದೆ"— "ಸ್ವಾಮಿ, ತಮ್ಮ ಮಾತಿಗೆ ನಾನು ಕೃತಜ್ಞನಾಗಿದ್ದೇನೆ. ನನಗೆ ವರುಷಕ್ಕೆ ಇಪ್ಪತ್ತು ಸಾವಿರ ಸಂಪಾದನೆಯಾಗಿದ್ದರೆ ನಾನು ಇನ್ನೂ ಖುಷಿಯಾಗಿರುತ್ತಿದ್ದೆ. ಸದ್ಯ, ದೇವರು ದೊಡ್ಡವನು. ನನಗೆ ಮೂರು ಕಾಸು ಉತ್ಪತ್ತಿಯಿಲ್ಲದಿದ್ದರೂ ಈಗಲೂ ಖುಷಿಯಾಗಿಯೆ ಇದೇನೆ. ಜೇಬಿನಲ್ಲಿ ಮೂರಾಣೆ ಇದ್ದರೆ ಒಂದೂವರೆ ಆಣೆಗೆ ಪಾಲುದಾರನನ್ನಾಗಿ ಇನ್ನೊಬ್ಬನನ್ನು ಕರೆದುಕೊಂಡು ಹೋಗುವುದಕ್ಕೆ ಹಿಂದು ಮುಂದು ನೋಡುವುದಿಲ್ಲ. ದುಡ್ಡೇ ಇಲ್ಲದಿದ್ದರೆ ನನ್ನ ಊಟದ ಬಿಲ್ಲುಕೊಡುವ ಉದಾರಹೃದಯರಿಂದ ಊಟ ಸಂಪಾದಿಸುವುದಕ್ಕೆ ಹಿಂಜರಿಯುವುದೂ ಇಲ್ಲ. ಈಗ ಊಟಕ್ಕೆ ಹೋಗೋಣವೇನು?".

ಖುಷಿಪಡಿಸುವ ಜೊತೆಗಾರನಿಗಾಗಿ ನಾಲ್ಕು ಕಾಸು ಖರ್ಚು ಮಾಡುವುದಕ್ಕೆ ನಾನು ಎಂದೂ ಹಿಂದೇಟು ಹಾಕುತ್ತಿರಲಿಲ್ಲವಾಗಿ

ಇಬ್ಬರೂ ಒಡನೆಯೇ ಪಕ್ಕದ ಒಂದು ಹೋಟಲಿಗೆ ಹೋದೆವು. ನಿಮಿಷಮಾತ್ರದಲ್ಲಿ ನಮ್ಮ ಮೇಜಿನಮೇಲೆ ಹಬೆಯಾಡುತ್ತಿದ್ದ ಮಾಂಸ, ನೊರೆಯಾಡುತ್ತಿದ್ದ ಮದ್ಯ ಬಂದವು. ಇಂತಹ ಸುಭೋಜ್ಯವಾದ ವಸ್ತುವನ್ನು ಕಂಡೊಡನೆಯೇ ನನ್ನ ಸ್ನೇಹಿತ ನಿಗೆಎಷ್ಟೊಂದು ತೃಪ್ತಿಯಾಯಿತೋ! "ಮೂರು ಕಾರಣಗಳಿಂದ, ನನಗೆ ಈ ಊಟ ತುಂಬ ಇಷ್ಟ. ಮೊದಲನೆಯದಾಗಿ ಗೋಮಾಂಸ ನನಗೆ ಯಾವಾಗಲೂ ಆಪ್ಯಾಯಮಾನ. ಎರಡ ನೆಯದಾಗಿ ಈಗ ನನಗೆ ತುಂಬ ಹಸಿವು. ಮೂರನೆಯದಾಗಿ ಮತ್ತು ಕೊನೆಯದಾಗಿ ಈ ಮಾಂಸ ಈಗ ನಾನು ಬಿಟ್ಟಿಯಾಗಿ ಗಿಟ್ಟಿಸಿಕೊಂಡದ್ದು. ಕಾಸು ಕೊಡದ ಮಾಂಸದ ಹಾಗೆ ಯಾವುದು ರುಚಿ!"

ಹೀಗೆ ಹೇಳಿ ಆತನು ಊಟಕ್ಕೆ ಪ್ರಾರಂಭ ಮಾಡಿದ. ಮಾಂಸದ ಗೀಳಿಗೂ ಹೊಟ್ಟೆಯ ಹಸಿವಿಗೂ ಪೈಪೋಟಿ ನಡೆಯು ವಂತೆ ತೋರಿತು. ಊಟವಾದ ಮೇಲೆ ಮಾಂಸ ಚೆನ್ನಾಗಿ ಬೆಂದಿರ ಲಿಲ್ಲವೆಂದು ಹೇಳಿದ. 'ಸ್ವಾಮಿ, ಮಾಂಸ ಚೆನ್ನಾಗಿರಲಿಲ್ಲ, ಸಾಲದ್ದಕ್ಕೆ ಅದು ಎತ್ತಿನ ಪಿತ್ರ ಮಾಂಸ ಎಂದು ಕಾಣುತ್ತದೆ. ಹಸಿದ ಹೊಟ್ಟೆಯ ಬಡತನದ ಆಮೋದಗಳನ್ನು ಏನೆಂದು ಹೊಗ ಳೋಣ! ಭಿಕ್ಷುಕರಾದ ನಾವು ಪ್ರಕೃತಿ ಮಾತೆಯ ಮುದ್ದಿನ ಕಂದಮ್ಮಗಳು; ಐಶ್ವರ್ಯವಂತರನ್ನು ಆಕೆ ಪಕ್ಕ ಬಲತಾಯಿಯು ಹಾಗೆ ನೋಡಿಕೊಳ್ಳುತ್ತಾಳೆ. ಅವರಿಗೆ ಯಾವುದರಿಂದಲೂ ತೃಪ್ತಿಯಿಲ್ಲ; ಯಾವ ಭಾಗದ ಮಾಂಸವನ್ನು ಅಟ್ಟರೂ ಅದು ಜೀಯುವುದಿಲ್ಲ, ಉಪ್ಪು ಖಾರ ಹಚ್ಚಿಕೊಡಿ, ಆಗಲೂ ಅವರಿಗೆ ಹಸಿವಾಗುವುದಿಲ್ಲ. ಭಿಕ್ಷುಕರಿಗಾದರೋ ಪ್ರಪಂಚದಲ್ಲಿರುವ ಸರ್ವ ಪದಾರ್ಥವೂ ಸ್ವಾದು, ಸರ್ವವೂ ಆಪ್ಯಾಯಮಾನ!

ಫ್ರಾನ್ಸಿನ 'ಷ್ಯಾಂಪೆಯನ್' ಸಾರಾಯಿಗಿಂತ ಕಾಲ್‌ವರ್ಟಿನ ಕಳ್ಳು ರುಚಿ, ಹಂಗೇರಿಯ ಟೊಕೋ ಹೆಂಡಕ್ಕಿಂತ ಮನೆಯಲ್ಲಿ ಹುಳಿಸಿ ತಯಾರಿಸಿದ ಬಿಯರ್ ಇನ್ನೂ ರುಚಿ. ಮದ್ಯವೋ ಮದ್ಯ! ಖುಷಿಯೋ ಖುಷಿ! ಊರಲ್ಲೆಲ್ಲೂ ಅಂಗೈಯಗಲ ಭೂಮಿಕಾಣಿಯಿಲ್ಲದಿದ್ದರೂ ಜೋದಲ್ಲಿಲ್ಲ ನಮ್ಮ ಅದೃಷ್ಟವೇ ಅದೃಷ್ಟ! ಕಾಶನ್‌ವಾಲಿನ ಅರ್ಧವೆಲ್ಲ ಪ್ರವಾಹದಲ್ಲಿ ಕೊಚ್ಚಿ ಹೋದರೆ ತಾನೆ ನನಗೇನು ಸಂಕಟ! ಅಲ್ಲಿ ನನಗೇನು ಜಮೀನಿದೆಯೇ! ಷೇರು ಬೆಲೆ ಇಳಿದು ಹೋದರೆ ತಾನೆ ನನಗೇನು ನಷ್ಟ! ನಾನೇನು ಯಹೂದಿಯೇ?' ಅವನ ಆ ಮಾತಿನ ಉಲ್ಲಾಸವೂ, ಆ ಬಗೆಯ ದಾರಿದ್ರ್ಯವೂ ಅವನ ಸೈಜಸ್ಥಿತಿಯನ್ನೂ, ಅವನ ಬಾಳಿನ ಕತೆಯನ್ನೂ ತಿಳಿದುಕೊಳ್ಳಬೇಕೆಂಬ ನನ್ನ ಕುತೂಹಲವನ್ನು ಕೆರಳಿಸಿದವೆಂದು ಒಪ್ಪಿಕೊಳ್ಳುತ್ತೇನೆ. ನನ್ನ ಅಪೇಕ್ಷೆಯನ್ನು ತಣಿಸಬೇಕೆಂದು ಆತನನ್ನು ಕೇಳಿಕೊಂಡೆ. 'ಅವಶ್ಯವಾಗಿ ಆಗಬಹುದು ಸ್ವಾಮಿ, ಅದಕ್ಕೇನು! ನಿದ್ರೆ ಬರದ ಹಾಗೆ ಇನ್ನು ಕೊಂಚ ಕುಡಿದುಬಿಡೋಣ ಅಷ್ಟೆ; ಎಚ್ಚರವಿರುವಾಗಲೇ ಇನ್ನೊಂದು ಗ್ಲಾಸು ಕುಡಿದುಬಿಡೋಣ! ಓ! ಬೀರ್ ತುಂಬಿದ ಗ್ಲಾಸು ಎಷ್ಟು ಮೋಹಕವಾಗಿರುತ್ತದೆ!'

"ನಾನು ಸದ್ವಂಶದಲ್ಲಿಯೆ ಹುಟ್ಟಿದವನು ಎನ್ನಿ: ನನ್ನ ಪೂರ್ವಿಕರು ಪ್ರಪಂಚದಲ್ಲಿ ಸಾಕಷ್ಟು ಗಲಭೆ ಎಬ್ಬಿಸಿದಾರೆ ಎನ್ನಿ; ನನ್ನ ತಾಯಿ ಸಿಂಪಿ ಹೊತ್ತುಕೊಂಡು ಬೀದಿ ಬೀದಿಯಲ್ಲಿ ಕೂಗಿ ಮಾರಾಟ ಮಾಡುತ್ತಿದ್ದಳು. ನನ್ನ ತಂದೆ ಡೋಲು ಬಜಾಯಿಸುತ್ತಿದ್ದ. ನಮ್ಮ ವಂಶದಲ್ಲಿ ಕೆಲವರು ಕೊಂಬು ಹಿಡಿದವರೂ ಇದ್ದರೆಂದು ಕೇಳಿದ್ದೇನೆ. ದೊಡ್ಡ ಮನುಷ್ಯರೆನಿಸಿಕೊಂಡವರನೇಕರಿಗೆ ಇಂತಹ ಹೇಳಿಕೊಳ್ಳುವ ವಂಶಚರಿತ್ರೆ ಇರುವುದು ಅಪೂರ್ವ.

ಆದರೆ ಇದು ಸದ್ಯಕ್ಕೆ ಅಪ್ರಕೃತ; ನಾನು ನನ್ನ ತಂದೆ ತಾಯಿಗಳಿಗೆ ಒಬ್ಬನೆ ಮಗನಾಗಿದ್ದುದರಿಂದ ನಮ್ಮ ತಂದೆ ತನ್ನ ಕಸಬಿನಲ್ಲಿಯೆ ನನ್ನನ್ನು ತರಬೇತು ಮಾಡಲು ಇಷ್ಟಪಟ್ಟಿದ್ದ. ಆತನ ಕಸಬು ಗೊಂಬೆಯಾಟಕ್ಕೆ ಡೋಲು ಬಡಿಯುವುದು ಎಂದು ಹೇಳಿದೆನಷ್ಟೆ. ಹೀಗೆ ನನ್ನ ಕುಮಾರ ವಯಸ್ಸಿನ ಉದ್ಯೋಗವೆಂದರೆ ಗೊಂಬೆಯಾಟದ ನಾಯಕ ನಾಯಕಿಯರನ್ನು ಪರಿಚಯ ಮಾಡಿ ಕೊಡುವುದು. ನಮ್ಮ ತಂದೆಗೆ ಡೋಲು ಬಡಿಯುವ ವಿದ್ಯೆಯನ್ನು ನನಗೆ ಕಲಿಸಬೇಕೆಂದು ತುಂಬ ಇಷ್ಟ. ಅದಕ್ಕಾಗಿ ಬಡಿತದ ಎಲ್ಲ ತಾಳಮಾನಗಳನ್ನೂ ಲಯಗತಿಗಳನ್ನೂ ನನಗೆ ಬಿಡದೆ ಕಲಿಸಿದ. ಆದರೆ ನಾನೇನೂ ಪಾಠದಲ್ಲಿ ಮುಂದುವರಿಯಲಿಲ್ಲ. ಏಕೆಂದರೆ ಸ್ವಭಾವತಃ ನನಗೆ ಸಂಗೀತ ಹಿಡಿಸದು. ಹೀಗಾಗಿ ಹದಿನೈದು ವರ್ಷದ ಹುಡುಗನಾಗಿದ್ದಾಗ ನಾನು ಸಿಪಾಯಿ ಕೆಲಸಕ್ಕೆ ಹೆಸರುಕೊಟ್ಟು ಸೇರಿದೆ. ಹಿಂದೆ ಡೋಲು ಬಡಿಯುವುದನ್ನು ಹೇಗೆ ಅಸಹ್ಯವೆಂದು ತಿರಸ್ಕರಿಸಿದೆನೋ, ಈಗ ಬಂದೂಕು ಹೊರುವುದನ್ನೂ ಹಾಗೆಯೇ ತಿರಸ್ಕರಿಸಿದೆ. ಅದಾಗಲೀ ಇದಾಗಲೀ ನನ್ನ ಜಾಯಮಾನಕ್ಕೆ ಒಗ್ಗಿ ಬರಲಿಲ್ಲ. ಏಕೆಂದರೆ ಸ್ವಭಾವತಃ ನಾನು ಸಂಭಾವಿತನಾದ ದೊಡ್ಡ ಮನುಷ್ಯನೆನಿಸಿಕೊಳ್ಳಬೇಕೆಂಬ ಹಂಬಲಿನವನು. ಮೇಲಾಗಿ, ನನ್ನ ಕ್ಯಾಪ್ಟನ್ ಸಾಹೇಬರಿಗೆ ನಾನು ವಿಧೇಯನಾಗಿರಬೇಕಂತೆ! ಅವನ ಇಚ್ಛೆ ಅವನಿಗೆ, ನನ್ನ ಇಚ್ಛೆ ನನಗೆ, ನಿಮ್ಮ ಇಚ್ಛೆ ನಿಮಗೆ. ಹೀಗಾಗಿ ಯಾರಾದರೂ ಸರಿಯೆ, ಅವರವರ ಇಚ್ಛಾನುಸಾರ ನಡೆಯುವುದರಲ್ಲಿಯೇ ಹೆಚ್ಚಿನ ಅನುಕೂಲವಿದೆ ಎಂಬ ಸಮಂಜಸವಾದ ನಿರ್ಣಯಕ್ಕೆ ನಾನು ಬಹುಬೇಗನೆ ಬಂದುಬಿಟ್ಟೆ.

"ಹೀಗಾಗಿ ಸೈನಿಕ ಜೀವನದಲ್ಲಿಯೂ ನನಗೆ ನಿರಾಶೆಯೂ

ನಿರುತ್ಸಾಹವೂ ಉಂಟಾಯಿತು; ಸರ್ವಿಸು ಬಿಟ್ಟುಬಿಡಲು ರಜ ಕೇಳಿದೆ. ಆದರೆ ನಾನು ಆಳಿತ್ತರ ಸರಿಯಾಗಿದ್ದವನಾಗಿ ಪಗಡ ದಸ್ತಾದ ಆಸಾಮಿಯಾಗಿದ್ದುದರಿಂದ ಆತ ನನ್ನ ಅಭಿಲಾಷೆಗೆ ನನ್ನನ್ನು ವ್ಯಂಗ್ಯವಾಗಿ ಶ್ಲಾಘನೆಮಾಡಿ ನನ್ನನ್ನು ಕಂಡರೆ ತನಗೆ ತುಂಬ ವಿಶ್ವಾಸವೆಂದೂ ನಾನು ಅಗಲಬಾರದೆಂದೂ ಹೇಳಿದ. ನಾನು ಸೈನ್ಯಕ್ಕೆ ಸೇರಿದ ವಿಷಯದಲ್ಲಿ ಪಶ್ಚಾತ್ತಾಪವನ್ನು ಪ್ರಕಟ ಪಡಿಸಿ ಬಹಳ ದೈನ್ಯದಿಂದ ನಮ್ಮ ತಂದೆಗೆ ಒಂದು ಪತ್ರ ಬರೆದೆ. ಆತ ನನ್ನ ಬಿಡುಗಡೆಗಾಗಿ ನಿಧಿಸಂಗ್ರಹಮಾಡಿಯಾದರೂ ನನ್ನನ್ನು ಬಿಡಿಸಿಕೊಳ್ಳಬೇಕೆಂದು ಗೋಗರೆದೆ. ಆದರೆ ಆ ಪುಣ್ಯಾತ್ಮನಿಗೆ ನನ್ನ ಮೇಲೆ ಎಷ್ಟು ಮಮತೆಯೋ ಹೆಂಡದ ಮೇಲೆಯೂ ಅಷ್ಟೇ ಮಮತೆ. ಸ್ವಾಮಿ, ಇನ್ನೊಂದು ಗ್ಲಾಸ್ ತೆಗೆದುಕೊಳ್ಳುತ್ತೇನೆ. ಕುಡಿಯುವುದರ ಗೀಳು ಇರುವವರು ಎಂದಾದರೂ ಇನ್ನೊಬ್ಬರ ಬಿಡುಗಡೆಗೆ ಕಾಸು ಕೊಡುತ್ತಾರೆಯೇ? ಏನು ಹೇಳಿ ಏನು ಬಂತು. ಆತ ನನ್ನ ಕಾಗದಕ್ಕೆ ಉತ್ತರ ಕೂಡ ಬರಿಯಲಿಲ್ಲ. ಏನು ಮಾಡ ಬಹುದು ಹೇಳಿ! ನನಗೆ ನಾನೆ ಅಂದುಕೊಂಡೆ, ಕೈಲಿ ಕಾಸಿಲ್ಲ ದಿದ್ದರೆ ಬೇರೆ ಯಾವುದಾದರೂ ವಿಧಾನದಿಂದ ಬಿಡುಗಡೆಯಾಗ ಬೇಕು. ಎಂದರೆ ಹೇಳದೆ ಕೇಳದೆ ಪರಾರಿಯಾಗಬೇಕು. ನಾನು ಮಾಡಿದ್ದೂ ಹಾಗೆಯೇ. ದುಡ್ಡುಕೊಟ್ಟು ಪಡೆಯುವುದನ್ನು ಕೊಡವೆ ಸುಲಭವಾಗಿ ಪಡೆದಂತಾಯಿತು.

ಒಳ್ಳೆಯದು, ಈಗ ನಾನು ತಕ್ಕಮಟ್ಟಿಗೆ ಮಿಲಟರಿ ಉದ್ಯೋಗ ದಿಂದ ಬಿಡುವು ಪಡೆದಂತಾಯಿತು; ನಾನು ನನ್ನ ಯೂನಿಫಾರಂ ಮಾರಿದೆ. ಅದಕ್ಕೊ ಹೊಲಸು ಬಟ್ಟೆಗಳನ್ನು ಕೊಂಡೆ. ಯಾರಾ ದರೂ ಬೆನ್ನಟ್ಟಿ ಬಂದರೆ ಕೈಗೆ ಸಿಗಬಾರದೆಂದು ನಿರ್ಜನಪಥದಲ್ಲಿ ನಡೆದೆ. ಸಂಜೆ ಹೊತ್ತಿನಲ್ಲಿ ಒಂದು ಹಳ್ಳಿಗೆ ಹೋಗುತ್ತಿದ್ದಾಗ

ಯಾವನೋ ಒಬ್ಬ ನೆಲದ ಮೇಲೆ ಬಿದ್ದಂತೆ ತೋರಿತು. ಹತ್ತಿರ ನೋಡಿದಾಗ ಆತ ಪಾದ್ರಿಯ ಸಹಾಯಕನೊಬ್ಬನೆಂದು ಗೊತ್ತಾಯಿತು. ಕೆಸರು ದಾರಿಯಲ್ಲಿ ಹೋಗುತ್ತಿದ್ದಾಗ ಕುದುರೆಯಿಂದ ಬಿದ್ದು ಮೈಯೆಲ್ಲ ಕೆಸರಾಗಿತ್ತು. ಅವನಿಗೆ ನನ್ನ ಸಹಾಯ ಬೇಕಿತ್ತು. ನಾನು ಸಹಾಯ ನೀಡಿದೆ. ಕೆಸರಿನಲ್ಲಿ ಹೂಳಿ ಹೋಗಿದ್ದ ಅವನನ್ನು ಮೇಲಕ್ಕೆ ಎತ್ತುವುದು ಶ್ರಮಸಾಧ್ಯವಾಯಿತು. ಆತ ನನ್ನ ಉಪಕಾರವನ್ನು ಕೃತಜ್ಞತೆಯಿಂದ ನೆನೆದು ತನ್ನ ಪಾಡಿಗೆ ತಾನು ಹೊರಟುಬಿಟ್ಟ. ಆದರೆ ನಾನು ಅವನ ಬೆನ್ನು ಹಿಡಿದು ಅವನ ಮನೆಗೇ ಹೋದೆ. ಏಕೆಂದರೆ ತನ್ನ ಮನೆಯ ಬಾಗಿಲಲ್ಲಿಯೇ ನನ್ನ ಉಪಕಾರವನ್ನು ನೆನೆಯುವವನನ್ನು ಕಂಡರೆ ನನಗೆ ತುಂಬ ಆಸೆ. ಆತ ನಾನು ಯಾರ ಮಗ, ಯಾವಾಗ ಬಂದೆ, ನಾನೇನು ವಿಧೇಯನೇ ಎಂದು ಮುಂತಾಗಿ ನೂರಾರು ಪ್ರಶ್ನೆಗಳ ಸುರಿಮಳೆ ಹಾಕಿದ. ನಾನು ಅವನ ಪ್ರಶ್ನೆಗಳಿಗೆಲ್ಲ ಆದಷ್ಟು ತೃಪ್ತಿಕರವಾಗಿ ಉತ್ತರ ಹೇಳಿ ನಡೆನುಡಿಗಳಲ್ಲಿ, ಸತ್ಯ ವಿಧೇಯತೆಗಳಲ್ಲಿ ನಾನು ತೀರ ಸ್ತಿಮಿತದವನೆಂಬಂತೆ ಅವನಿಗೆ ನನ್ನ ಒಂದು ವ್ಯಕ್ತಿತ್ವದ ಸುಂದರಕಲ್ಪನೆಯನ್ನು ಮಾಡಿಕೊಟ್ಟೆ. ಸ್ವಾಮಿ, ನಿಮ್ಮ ಆರೋಗ್ಯಕ್ಕಾಗಿ ಇನ್ನೊಂದು ಗ್ಲಾಸು ಇಳಿಸುತ್ತೇನೆ. ದೊಡ್ಡ ಕಥೆಯನ್ನು ಸಣ್ಣ ಕಥೆಯನ್ನಾಗಿಮಾಡಿ ಮುಗಿಸುವುದಾದರೆ ಆತನಿಗೆ ಒಬ್ಬ ಸೇವಕ ಬೇಕಾಗಿತ್ತು. ನನ್ನನ್ನು ನೇಮಿಸಿಕೊಂಡ. ಅವನೊಡನೆ ನಾನು ಇದ್ದದ್ದು ಎರಡೇ ತಿಂಗಳು; ನಮಗೆ ಒಬ್ಬರಿಗೊಬ್ಬರಿಗೆ ಹೆಚ್ಚು ಹೊಂದಿಕೆಯಾಗಲಿಲ್ಲ. ನನಗೆ ಊಟ ತಿಂಡಿಗಳ ಮೇಲೆ ತುಂಬ ಆಸೆ, ಆತ ತುಂಬ ಕಡಿಮೆ ಹೊಟ್ಟೆಗೆ ಹಾಕುತ್ತಿದ್ದ; ನನಗೆ ಚಲುವೆಯರಾದ ಕೆಲಸಗಿತ್ತಿಯರ ಆಸೆ. ನನ್ನ ಜೊತೆ ಕೆಲಸಗಿತ್ತಿ ಕುರೂಪಿ, ಕುಹುಕಿ. ಅವರಿಬ್ಬರೂ

ಸೇರಿ ನನ್ನನ್ನು ಉಪವಾಸ ಸಾಯಿಸಲು ಪ್ರಯತ್ನಪಡುತ್ತಿದ್ದಾಗ ಅವರ ಈ ಕೊಲೆಯ ಯತ್ನವನ್ನು ತಡೆಗಟ್ಟುವ ಪವಿತ್ರ ನಿರ್ಧಾರಕ್ಕೆ ಬಂದೆ. ಕೋಳಿಗಳು ಮೊಟ್ಟೆ ಇಟ್ಟೊಡನೆ ಅವುಗಳನ್ನೇ ಕದ್ದು ಬಿಡುತ್ತಿದ್ದೆ. ನನ್ನ ಕೈಗೆ ಸಿಗಬಹುದಾದ ಬಾಟಲಿಗಳನ್ನು ಒಂದೊಂದಾಗಿ ಖಾಲಿಮಾಡುತ್ತ ಬಂದೆ. ನನ್ನ ಕಣ್ಣಿಗೆ ಏನು ತಿನ್ನುವ ಪದಾರ್ಥ ಕಂಡರೂ ಕ್ಷಣಾರ್ಧದಲ್ಲಿ ಅದು ಮಂಗಮಾಯವಾಗಿಬಿಡುತ್ತಿತ್ತು. ಒಂದು ಮಾತಿನಲ್ಲಿ ಹೇಳುವುದಾದರೆ ನನ್ನಿಂದ ಉಪಯೋಗವಿಲ್ಲವೆಂಬುದು ಅವರಿಗೆ ಮನವರಿಕೆಯಾಯಿತು; ಹೀಗಾಗಿ ಒಂದು ಬೆಳಿಗ್ಗೆ ಎರಡು ತಿಂಗಳ ಕೂಲಿ ಮೂರು ಷಿಲ್ಲಿಂಗ್ ಆರು ಪೆನಿ ಕೈಮೇಲಿಟ್ಟು ತಾಂಬೂಲ ಕೊಟ್ಟರು."

"ಅತ್ತ ಸಂಬಳ ಬಟವಾಡೆಯಾಗುವುದರ ವ್ಯವಸ್ಥೆ ನಡೆಯುತ್ತಿದ್ದಾಗ ಇತ್ತ ನಾನು ಮನೆಬಿಟ್ಟು ಹೊರಡುವ ಸಿದ್ಧತೆ ನಡೆಸುತ್ತಿದ್ದೆ. ಔಟ್ ಹಾಸಿನಲ್ಲಿ ಎರಡು ಕೋಳಿಗಳು ಆಗ ತಾನೆ ಮೊಟ್ಟೆಯಿಟ್ಟಿದ್ದವು. ಅಭ್ಯಾಸಬಲದಿಂದ ನಾನು ಅಲ್ಲಿಗೆ ಹೋಗಿ ಮೊಟ್ಟೆಗಳನ್ನು ಜೇಬಿಗಿಳಿಸಿದೆ. ಮರಿಗಳನ್ನು ತಾಯಿಯಿಂದ ದೂರ ಮಾಡುವುದು ಅನ್ಯಾಯವೆಂದು ನನ್ನ ಚೀಲದೊಳಗೆ ಅವುಗಳನ್ನೂ ತೂರಿದೆ. ಈ ಮಿತವ್ಯಯದ ಮುನ್ನೆಚ್ಚರಿಕೆಯ ಕೆಲಸ ಮಾಡಿಯಾದಮೇಲೆ ಕೈಲಿ ದೊಣ್ಣೆ ಹಿಡಿದುಕೊಂಡು ಹೆಗಲಮೇಲೆ ಚೀಲ ಹಾಕಿಕೊಂಡು ನನ್ನ ಸಂಬಳ ತೆಗೆದುಕೊಳ್ಳುವುದಕ್ಕೆ ಹೋದೆ. ನನ್ನ ಆಶ್ರಯದಾತನಿಗೆ ಕಂಬನಿ ಸುರಿಸುತ್ತ ನಮಸ್ಕಾರ ಹೇಳಿ ಹೊರಟೆ. ಮನೆಯಿಂದ ಹತ್ತು ಮಾರು ಹೋಗುವುದರೊಳಗೆಯೆ; 'ಕಳ್ಳ ನಿಲ್ಲು! ನಿಲ್ಲು!' ಎಂಬ ಕೂಗು ಕೇಳಿಸಿತು. ಇದರಿಂದ ನನ್ನ ವೇಗ ಹೆಚ್ಚಾಯಿತೇ ವಿನಾ ಬೇರೆ ಯಾವ ಪ್ರಯೋಜನವೂ ಆಗಲಿಲ್ಲ. ನಾನು ನಿಂತುಬಿಟ್ಟಿದ್ದರೆ ಜನ ನನ್ನನ್ನೇ ಕಳ್ಳ ಎಂದು

ತಿಳಿದುಕೊಂಡು ಬಿಡುತ್ತಿದ್ದರು. ಆದ್ದರಿಂದ ಹಾಗೆ ಮಾಡದೆ ನನ್ನ ಪಾಡಿಗೆ ನಾನು ಹೊರಟೇ ಬಿಟ್ಟೆ. ಆ ಪಾದ್ರಿಯ ಮನೆಯಲ್ಲಿ ಕಳೆದ ಎರಡು ತಿಂಗಳೂ ಕುಡಿಯಲೇ ಇಲ್ಲವೋ ಏನೋ! ಅಂತಹ ಸಪ್ಪೆಯ ನೀರಸವಾದ ಎರಡು ತಿಂಗಳನ್ನು ಮತ್ತೆ ನನ್ನ ಜೀವಮಾನದಲ್ಲಿ ಕಳೆಯಬೇಕಾಗಿ ಬಂದರೆ ಹೆಂಡವೇ ನನಗೆ ವಿಷವಾಗಲಿ.

"ಕೆಲವು ದಿನಗಳು ಪ್ರಯಾಣದಲ್ಲಿ ಕಳೆದ ಮೇಲೆ ನನಗೆ ಮತ್ತೆ ಊರೂರು ತಿರುಗುವ ನಾಟ್ಯವಿಲಾಸಿಗಳ ಮಂಡಳಿಯು ಸಿಗಬೇಕೇ! ಅವರನ್ನು ದೂರದಿಂದ ನೋಡಿದಾಕ್ಷಣವೇ ನನ್ನ ಹೃದಯವು ಮಂಡಳಿಗೆ ಮಾರುಹೋಯಿತು. ಊರೂರು ಸುತ್ತುವ ಯಾವತ್ತೂ ಸಂಸ್ಥೆಗಳನ್ನು ಕಂಡರೆ ನನಗದೇನೋ ಒಂದು ತೆರನಾದ ಖಯಾಲಿ. ಅವರು ಇಕ್ಕಟ್ಟಾದ ದಾರಿಯಲ್ಲಿ ಉರುಳಿಬಿದ್ದ ಗಂಟುಗದಡಿಗಳನ್ನು ಎತ್ತಿ ಸರಿಪಡಿಸುವುದರಲ್ಲಿ ನಿರತರಾಗಿದ್ದರು. 'ನನ್ನ ಸಹಾಯ ಬೇಕೇ' ಎಂದೆ. 'ಅಗತ್ಯವಾಗಿ ಆಗಲಿ' ಎಂದರು. ಸ್ವಲ್ಪ ಹೊತ್ತಿನಲ್ಲಿಯೇ ನಮ್ಮ ಪರಿಚಯ ನಿಕಟವಾಗಿ ಬೆಳೆದು ಅವರು ಯಜಮಾನರಾದರು. ನಾನು ಸೇವಕನಾದೆ. ನನಗೆ ಮಂಡಳಿ ಸ್ವರ್ಗಸೀಮೆಯಾಗಿ ಪರಿಣಮಿಸಿತು. ಅವರು ಏಕಕಾಲದಲ್ಲಿ ಹಾಡುವರು, ಕುಣಿಯುವರು, ಕುಡಿಯುವರು, ತಿನ್ನುವರು, ಊರೂರು ಸುತ್ತುವರು. ಮನ್ಮಥನಾಣೆ! ಬಲರಾಮನಾಣೆ! ಮಂಡಳಿ ಸೇರುವವರೆಗೂ ನಾನು ಬದುಕಿಯೇ ಇರಲಿಲ್ಲವೇನೋ ಎನ್ನಿಸಿಬಿಟ್ಟಿತು ನಾನು ಪಾತರಗಿತ್ತಿಯ ಹಾಗೆ ಮೋಜಿನಲ್ಲಿ ಎಗರಾಡಿದೆ. ಮಾತು ಮಾತಿಗೆ ನಕ್ಕೆ. ನಾನು ಅವರನ್ನು ಮೆಚ್ಚಿಕೊಂಡಂತೆ ಅವರೂ ನನ್ನನ್ನು ಮೆಚ್ಚಿಕೊಂಡರು. ನೀವು ಕಂಡ ಹಾಗೆ ನಾನು ನೋಡುವುದಕ್ಕೆ

ಲಕ್ಷಣವಾಗಿದ್ದೆ. ಅಲ್ಲದೆ ಗರೀಬನಾಗಿದ್ದರೂ ದಿಟ್ಟತನದಿಂದಿದ್ದೆ.

"ಗುಳಿ ಹೋಗುವ ಜೀವನವೇ ನನಗೆ ಯಾವಾಗಲೂ ಪ್ರಿಯವಾದದ್ದು. ಕೆಲವು ವೇಳೆ ಸುಖಪಡುವುದೂ, ಕೆಲವು ವೇಳೆ ಕಷ್ಟಪಡುವುದೂ ಈ ಹೊತ್ತು ಸೆಖೆಯಾಗಿ ನಾಳೆ ಚಳಿಯಾಗಿರುವುದೂ, ಇದ್ದಾಗ ತಿನ್ನುವುದೂ, ತಂದಾಗ ಕುಡಿಯುವುದೂ ನನಗೆ ತುಂಬ ಹಿತ. ಆ ಸಂಜೆ ನಾವು ಟೆಂಟರ್‌ಡೆನ್ ಎಂಬ ಊರಿಗೆ ಹೋಗಿ ಒಂದು ಹೋಟಲಿನಲ್ಲಿ ಇಳಿದುಕೊಂಡೆವು. ಆ ಊರಿನಲ್ಲಿ ರೋಮಿಯೊ ಜ್ಯೂಲಿಯೆಟ್ ನಾಟಕದ ಕೆಲವು ದೃಶ್ಯಗಳನ್ನು ಆಡಬೇಕೆಂದು ನಿಶ್ಚಯಮಾಡಿದೆವು. ಪ್ರಖ್ಯಾತವಾದ ಕಂಪೆನಿಯ ನಟನೊಬ್ಬನು ರೋಮಿಯೊ ಪಾರ್ಟು ಮಾಡಬೇಕಾಗಿತ್ತು. ಹಿಂದೆಂದೂ ರಂಗದ ಮೇಲೆ ಬರದಿದ್ದ ಹೆಣ್ಣುಮಗಳೊಬ್ಬಳು ಜೂಲಿಯೆಟ್ ಆಗಬೇಕಿತ್ತು. ನನಗೆ ಮೊಂಬತ್ತಿ ಕರಿಕಲು ತೆಗೆಯುವ ಕೆಲಸ ಹಂಚಿಕೆಯಾಗಿತ್ತು. ಒಬ್ಬೊಬ್ಬರೂ ಅವರವರ ಕೆಲಸದಲ್ಲಿ ನಿಷ್ಣಾತರೇ. ನಮಗೆ ಉಡಿಗೆ ತೊಡಿಗೆಗಳನ್ನು ಅಳವಡಿಸಿಕೊಳ್ಳುವುದೇ ಒಂದು ಸಮಸ್ಯೆಯಾಗಿತ್ತು. ರೋಮಿಯೊ ಹಾಕಿಕೊಳ್ಳಬೇಕಾದ ಕೋಟನ್ನೇ ಒಳಮಗ್ಗುಲು ನೀಲಿಯ ಅಂಚನ್ನು ಹೊರಮಗ್ಗುಲು ಮಾಡಿ ಅವನ ಸ್ನೇಹಿತನಿಗೆ ತೊಡಿಸಬೇಕಿತ್ತು. ಒಂದೇ ಒಂದು ಉದ್ದನೆಯ ಕರಿಯ ರೇಶ್ಮೆ ತುಂಡನ್ನು ಜೂಲಿಯೆಟ್ಟಳ ಪೆಟಿಕೋಟಿಗೂ ಹೆಣದ ಪೆಟ್ಟಿಗೆ ಮೇಲೆ ಮುಚ್ಚುವ ಬಟ್ಟೆಗೂ ಬಳಸಬೇಕಾಗಿತ್ತು. ಪಕ್ಕದ ಅಂಗಡಿಯ ಗಂದಿಗರವನಿಂದ ಎರವಲು ತಂದ ಕಲಬತ್ತು ಕುಟ್ಟಣಿಗಳೇ ಘಂಟೆಯ ಉಪಕರಣವಾಯಿತು. ನಮ್ಮ ಹೋಟಲು ಮಾಲೀಕನ ಮನೆಯ ಮಕ್ಕಳೇ ಬಿಳೀ ಬಟ್ಟೆ ಹಾಕಿಕೊಂಡು ಶವಸಂಸ್ಕಾರದ ಮೆರವಣಿಗೆಯ ಗುಂಪಾಗಿ

ಬರುವಂತಾಯಿತು, ಒಟ್ಟಿನಲ್ಲಿ ನಮ್ಮಲ್ಲಿ ಮೂವರಿಗೆ ಪಾತ್ರೋಚಿತವಾದ ಪ್ರಸಾಧನವಾಗಬೇಕಾಗಿತ್ತು. ದಾದಿ ಒಬ್ಬಳಿಗೆ, ಹಸಿವಿನಿಂದ ನರಳುವ ಗಂದಿಗನೊಬ್ಬನಿಗೆ, ನನಗೊಬ್ಬನಿಗೆ. ನಮ್ಮ ಆಟ ಜನಪ್ರಿಯವಾಯಿತು. ಪ್ರೇಕ್ಷಕರೆಲ್ಲ ನಮ್ಮ ಅದ್ಭುತವಾದ ಸಾಮರ್ಥ್ಯಗಳಿಗೆ ಬೆರಗಾಗಿ ಹೋದರು.

ನಮ್ಮಂತಹ ಊರೂರು ತಿರುಗುವ ನಾಟ್ಯವಿಲಾಸಿಗಳ ಆಟವು ಜಯಪ್ರದವಾಗಬೇಕಾದರೆ ಒಂದೇ ಒಂದು ಮಾರ್ಗವಿದೆ. ಅತಿಯಾಗಿ ಭಾವೋದ್ರೇಕವಾಗುವಂತೆ ಕೂಗಾಡುವುದೇ ಆ ಮಾರ್ಗ. ಸಾಮಾನ್ಯವಾಗಿ ನಾವು ದಿನವಹಿ ಮಾತನಾಡುವಂತೆ ಮಾತನಾಡಿದರೆ ಅದು ಅಭಿನಯವೆನಿಸುವುದೂ ಇಲ್ಲ; ಜನಗಳು ಅದನ್ನು ನೋಡುವುದಕ್ಕೆ ಬರುವುದೂ ಇಲ್ಲ ಸಿಹಿಯಾದ ವೈನ್ ಕುಡಿದರೆ ನಾಲಿಗೆಗೆ ರುಚಿ ಊರುವ ಮೊದಲೇ ಗಂಟಲೊಳಕ್ಕೆ ಸಲೀಸಾಗಿ ಇಳಿಯುವ ಹಾಗೆ ಸಹಜವಾಗಿ ಮಾತನಾಡಿದರೆ ಭಾವೋದ್ರೇಕವಾಗುವುದರೊಳಗೆಯೇ ಮಾತು ಮನದ ಮರೆಯಲ್ಲಿ ಅಡಗಿಹೋಗುತ್ತದೆ. ಅದೇ ' ವೈನ್‌ಗಾರ್ ' ಕುಡಿದರೆ ನಾಲಗೆ ಕೊರೆದುಕೊಂಡು ಗಂಟಲೊಳಕ್ಕೆ ಹೋಗುತ್ತದೆ. ಕುಡಿಯುತ್ತಿದ್ದ ಹಾಗೆಯೇ ಕುಡಿತದ ಕಡಿತ ಅನುಭವ ವೇದ್ಯವಾಗುತ್ತದೆ. ಹಳ್ಳಿಯಲ್ಲಾಗಲಿ, ಪಟ್ಟಣದಲ್ಲಾಗಲಿ ಜನರಿಗೆ ಸಂತೋಷವಾಗಬೇಕಾದರೆ ಕೂಗಬೇಕು, ಕೈ ಕೈ ಹಿಸುಕಬೇಕು, ಚಿತ್ರವಿಚಿತ್ರವಾದ ಮುಖಭಂಗಿಗಳನ್ನು ತೋರಬೇಕು. ಎದೆ ಹೊಡೆದುಕೊಂಡು ತಲೆ ಬಡಿದುಕೊಂಡು ಮಲರೋಗ ಬಂದವರ ಹಾಗೆ ಲಿವಿಲಿವಿ ಒದ್ದಾಡಬೇಕು. ಚಪ್ಪಾಳೆ ಬೀಳಬೇಕಾದರೆ ಹೀಗೆ ಮಾಡಬೇಕು. ಇದೇ ಗೆಲುವಿಗೆ ದಾರಿ.

ಈ ಪ್ರಥಮ ಪ್ರದರ್ಶನದಲ್ಲಿಯೇ ನಮಗೆ ಅಪಾರವಾದ

ಯಶಸ್ಸು ಲಭಿಸಿತೆಂದ ಮೇಲೆ ಯಶಸ್ಸಿನ ಸ್ವಲ್ಪ ಭಾಗವಾದರೂ ನನಗೆ ಸೇರಿದ್ದು ಎಂದು ನಾನು ಹೇಳಿಕೊಂಡರೆ ತಪ್ಪಾಗಲಾರ ದಷ್ಟೆ. ಮುಂಬತ್ತಿ ಕರಕಲು ಸರಿಮಾಡಿದ್ದು ನಾನೇ. ಬತ್ತಿ ಸರಿ ಮಾಡುವವನೊಬ್ಬ ಸರಿಯಾಗಿಲ್ಲದಿದ್ದರೆ ಆಟ ಅರ್ಧಕ್ಕರ್ಧ ಕಳೆ ಕಟ್ಟುತ್ತಿರಲಿಲ್ಲ ಎಂಬುದು ಮಾತ್ರ ನೆನಪಿರಲಿ. ಇದೇ ರೀತಿಯಲ್ಲಿ ನಾವು ಹದಿನೈದು ದಿವಸ ಮೊಕ್ಕಾಂ ಮಾಡಿ ಆಟ ಆಡಿದೆವು. ಜನವೂ ಚೆನ್ನಾಗಿಯೇ ಸೇರುತ್ತಿತ್ತು. ಆದರೆ ಆ ಊರುಬಿಟ್ಟು ಹೊರಡುವ ಮುನ್ನಾದಿನ ಸಂಜೆ ನಮ್ಮ ಸರ್ವೋತ್ಕೃಷ್ಟವಾದ ಕಲಾರತ್ನವನ್ನು ಪ್ರದರ್ಶಿಸಲು ನಿಶ್ಚಯಿಸಿದ್ದೆವು. ಈ ಆಟಕ್ಕೆ ನಾವೆಲ್ಲರೂ ಸರ್ವಶಕ್ತಿಯನ್ನು ವೀಸಲಾಗಿರಿಸಿ ಆಟವನ್ನು ಯಶಸ್ವಿಯಾಗಿ ಮಾಡಬೇಕೆಂದು ಸಂಕಲ್ಪಿಸಿದ್ದೆವು. ಆಟ ಯಶಸ್ವಿಯಾಗುತ್ತದೆ ಎನ್ನುವ ನಂಬಿಕೆಯೂ ಇತ್ತು. ಟಿಕೇಟಿನ ದರವನ್ನು ಕೂಡಾ ಒಂದಕ್ಕೆ ಎರಡರಂತೆ ಹೆಚ್ಚು ಮಾಡಿ ದ್ದಾಯಿತು. ಆದರೇನು! ಮುಖ್ಯಪಾತ್ರವನ್ನು ವಹಿಸುವವ ನೊಬ್ಬನು ದಾರುಣವಾದ ಜ್ವರ ಬಂದು ಮಲಗಿಬಿಟ್ಟನು! ನಮ್ಮ ಸಣ್ಣ ಮಂಡಲಿಗೆ ಇದೊಂದು ಸಿಡಿಲಿನ ಏಟಿನಂತೆ ಬಂದು ಎರಗಿತು. ಕಂಪನಿಯವರೆಲ್ಲ ಗುಂಪು ಕಟ್ಟಿಕೊಂಡು ಹೋಗಿ ಖಾಹಿಲೆ ಮಲಗಿದವನನ್ನು ಕಂಡು ಇಂತಹ ಸಮಯದಲ್ಲಿ ವಿಪರೀತ ಖರ್ಚಿನಿಂದ ಮಾತ್ರ ಗುಣವಾಗಬಹುದಾದ ದಾರುಣ ವಾದ ಜ್ವರ ಬಂದು ಮಲಗಿದ್ದಕ್ಕೆ ಆ ನಟಶ್ರೇಷ್ಠನನ್ನು ತರಾಟಿಗೆ ತೆಗೆದುಕೊಳ್ಳುವುದರಲ್ಲಿದ್ದರು. ಇದೇ ಸಮಯ ಎಂದು ನಾನು ಮುಂದೆ ಬಂದು ಆ ಪಾರ್ಟು ನಾನೇ ಮಾಡುತ್ತೇನೆ ಎಂದು ಹೇಳಿದೆ. ಸಮಯವೂ ತುಂಬಾ ಕಠಿಣವಾಗಿತ್ತು. ಅವರು ಒಪ್ಪಿಕೊಂಡರು. ನಾನು, ಪಾತ್ರದಾರನು ಉಡು ಹೊದೆಯು

ಬೇಕಾದ ಮಾತುಗಳ ಹಾಳೆಗಳನ್ನು ಒಂದು ಕೈಯಲ್ಲಿ ಹಿಡಿದು ಕೊಂಡು ಇನ್ನೊಂದು ಕೈಯಲ್ಲಿ ಸೀಸೆ ಹಿಡಿದೆ. ಸ್ವಾಮಿ; ನಿಮ್ಮ ಆರೋಗ್ಯಕ್ಕಾಗಿ ಇನ್ನೊಂದು ಸೀಸೆ ಬಸಿದುಕೊಳ್ಳುತ್ತೇನೆ. ಮರುದಿನವೇ ಪೂರ್ವಪ್ರದರ್ಶನವನ್ನಿಟ್ಟುಕೊಂಡು ಕೂಡಲೆ ಆಡ ಬೇಕಾಗಿದ್ದ ನಾಟಕದ ಪಾತ್ರವನ್ನು ಆಳವಾಗಿ ಅಭ್ಯಾಸಮಾಡಿದೆ.

ಕುಡಿತದಿಂದ ನನ್ನ ಜ್ಞಾಪಕಶಕ್ತಿಗೆ ವಿಶೇಷವಾದ ಸಹಾಯ ವಾಯಿತು. ನನಗೇ ಆಶ್ಚರ್ಯವಾಗುವಷ್ಟು ಜಾಗ್ರತೆಯಾಗಿ ನನ್ನ ಪಾತ್ರ ನಾನು ಕಲಿತುಕೊಂಡೆ. ಮುಂದೆ ಬತ್ತಿ ಸರಿ ಮಾಡುವ ಕೆಲಸಕ್ಕೆ ಉದ್ದಂಡ ನಮಸ್ಕಾರ ಹಾಕಿದೆ. ಇನ್ನೂ ಘನತರವಾದ ಕಾರ್ಯಕಲಾಪಗಳಿಗೆ ಸ್ವಭಾವತಃ ನಾನು ಅಳವಟ್ಟಿರುವೆನೆಂಬುದನ್ನು ಅಂದೇ ಅರಿತುಕೊಂಡೆ. ಅಲ್ಲದೆ ಇನ್ನುಮೇಲೆ ಕ್ರಮಕ್ರಮವಾಗಿ ಇಂತಹ ಸದವಕಾಶವನ್ನು ಉಪಯೋಗಿಸಿಕೊಂಡು ಮುಂದಕ್ಕೆ ಬರಬೇಕೆಂದು ನಿರ್ಧರಿಸಿದೆ. ಪ್ರದರ್ಶನಾಭ್ಯಾಸದ ವೇಳೆ, ಎಲ್ಲರೂ ಒಟ್ಟಿಗೆ ಸೇರಿದ್ದಾಗ ನನ್ನ ಮನಸ್ಸಿನೊಳಗೆ ಇತ್ತೀಚೆಗೆ ಆದ ಅದ್ಭುತವಾದ ಬದಲಾವಣೆ ಗಳನ್ನು ನನ್ನ ಜೊತೆಯುವರಿಗೆ—ಈಗ ಅವರೇನೂ ನನ್ನ ಯಜಮಾನರಲ್ಲವಷ್ಟೆ—ವಿವರಿಸಿದೆ. ಆ ಖಾಯಿಲೆಯ ಮನುಷ್ಯ ಆತುರಪಡುವುದು ಬೇಡ, ಸಾವಕಾಶವಾಗಿ ಗುಣಮಾಡಿಕೊಳ್ಳಲಿ, ನಾನು ಅವನ ಪಾತ್ರವನ್ನು ಎಲ್ಲರ ಶ್ಲಾಘನೆಗೂ ಪಾತ್ರವಾಗು ವಂತೆ ಅಭಿನಯಿಸುತ್ತೇನೆ. ಅವನಿಗೆ ಸಾಯುವುದು ಉಚಿತ ಕಂಡರೆ ಸಾಯಲಿ; ಅವನಿಂದ ನಿಮಗೆ ನಷ್ಟವಾಯಿತೆಂದು ಹೇಳು ವುದಕ್ಕೆ ಆಸ್ಪದವಿಲ್ಲದ ಹಾಗೆ ನಾನು ಮಾಡುತ್ತೇನೆ. ಹೀಗೆಂದು ನಾನು ಜೊತೆಯುವರಿಗೆ ಹೇಳಿದೆ. ನಾನು ಅವರ ಮುಂದೆ ಕಂಠಪಾಠ ಒಪ್ಪಿಸಿದೆ. ಸಟೆತುಕೊಂಡು ನಡೆದೆ, ಪಟಾಟೋಪ

ಮಾಡುತ್ತ ಒದರಾಡಿದೆ. ಚಪ್ಪಾಳೆ ಬಡಿದರು. ಮಂಡಲಿಯವರು ಇನ್ನೊಬ್ಬ ವಿಖ್ಯಾತ ನಟನು ಪಾತ್ರವಹಿಸುವನೆಂದು ಸಾರಿದರು. ಒಡನೆಯೇ ಮುಂದುಗಡೆಯ ಶ್ರೀಮಂತರ ಸೀಟುಗಳೆಲ್ಲ ಕಾಯ್ದಿಡಲ್ಪಟ್ಟವು. ನನ್ನಿಂದಾಗಿ ಮಂಡಲಿಗೆ ಹೆಚ್ಚು ಹಣ ಸಂಪಾದನೆಯಾಗಿರುವುದರಿಂದ ಲಾಭದಲ್ಲಿ ನನ್ನ ಪಾಲು ನನಗಿರಬೇಕೆಂದು ನಾನು ಮನಸ್ಸಿನಲ್ಲಿ ನಿರ್ಧರಿಸಿಕೊಂಡೆ. 'ಮಹನೀಯರೆ, ನಾನೇನೂ ನಿಮಗೆ ಉಪದೇಶ ಮಾಡುತ್ತಿಲ್ಲ. ಅಂತಹ ದುರುದ್ದೇಶವು ನನ್ನಿಂದ ಸಾಧ್ಯವಿದ್ದಷ್ಟೂ ದೂರವಾಗಿರಲಿ. ತುಂಬ ಸದುದ್ದೇಶದಿಂದಲೇ ನೀವು ನನ್ನ ಹೆಸರನ್ನು ಹಸ್ತಪತ್ರಿಕೆಗಳಲ್ಲಿ ಅಚ್ಚುಮಾಡಿದ್ದೀರಿ. ಈಗ ಪರಿಸ್ಥಿತಿ ಇರುವ ಹಾಗೆ ನೀವು ನನ್ನನ್ನು ಬಿಟ್ಟು ಆಡುವ ಹಾಗೆಯೂ ಇಲ್ಲ. ನೀವೆಲ್ಲ ಹೇಗೆ ಹಣ ತೆಗೆದುಕೊಳ್ಳುತ್ತಿರುವಿರೋ ಹಾಗೆಯೆ ನನ್ನ ಅಭಿನಯಕ್ಕೂ ಹಣ ಸಂದಾಯವಾಗುವುದು ನ್ಯಾಯ. ಆ ರೀತಿ ಹಣ ಕೊಡುತ್ತೀರಿ ಎಂದು ನಂಬಿದ್ದೇನೆ. ಇಲ್ಲದಿದ್ದರೆ ನಾನು ನನ್ನ ಷರತ್ತುಗಳನ್ನು ಹಿಂದಕ್ಕೆ ತೆಗೆದುಕೊಳ್ಳುತ್ತೇನೆ. ನಾನು ನನ್ನ ಚಿಮುಟ ಹಿಡಿದು ಯಥಾಪ್ರಕಾರ ಬತ್ತಿ ಸರಿಮಾಡಲು ಹೋಗುತ್ತೇನೆ.' ನನ್ನ ಸೂಚನೆ ಅವರಿಗೇನೂ ಹಿತವಾಗಿರಲಿಲ್ಲ. ಹಾಗೆಂದು ಪ್ರತಿಭಟಿಸುವುದಕ್ಕೂ ಸಾಧ್ಯವಿರಲಿಲ್ಲ. ಪರಿಸ್ಥಿತಿ ಕಠಿಣತಮವಾಗಿತ್ತೆಂದು ಅವರು ಒಪ್ಪಿಕೊಂಡರು. ನಾನು ಬಜಾಜೆಟ್ ದೊರೆಯ ವೇಷದಲ್ಲಿ ರಂಗದ ಮೇಲೆ ಕಾಣಿಸಿಕೊಂಡೆ. ಕಾಲುಚೀಲವನ್ನ ತಲೆಯ ಪೇಟವನ್ನಾಗಿ ಮಾರ್ಪಡಿಸಿ ಆ ಪೇಟದಿಂದ ಗಂಟಿಕ್ಕಿದ ಹುಬ್ಬುಗಳನ್ನು ಬಿಗಿದುಕಟ್ಟಿ ಕೈಯಲ್ಲಿ 'ಜಾಕ್ ಚೈನ್' ಆಡಿಸುತ್ತ ಬಂದೆ. ಈ ಪ್ರಾಂತಕ್ಕೆ ಹೇಳಿ ಮಾಡಿಸಿದಂತಿತ್ತು ನನ್ನ ವ್ಯಕ್ತಿತ್ವ. ನಾನು ತುಂಬು ಎತ್ತರದ ಆಳು;

ಜೊತೆಗೆ ನನ್ನ ಗಂಟಲೂ ದೊಡ್ಡದು. ನಾನು ರಂಗದ ಮೇಲೆ ಕಾಣಿಸಿಕೊಂಡ ರೀತಿಗಾಗಿಯೇ ಜನರು ಚಪ್ಪಾಳೆ ಹೊಡೆದರು. ಒಂದು ಮುಗುಳುನಗೆ ಬೀರಿ ಸಭಿಕರನ್ನೆಲ್ಲ ಒಮ್ಮೆ ನೋಡಿ ತುಂಬ ಗಂಭೀರಭಾವದಿಂದ ನಸುಬಾಗಿ ಮಣಿದೆ. ಹೀಗೆ ಮಾಡುವುದು ನಮ್ಮ ಪದ್ಧತಿ. (ಸ್ವಾಮಿ, ಸೀಸೆ ಖಾಲಿಯಾಗಿದೆ!) ಅದು ದುರಂತ ನಾಯಕನ ಪಾತ್ರವಾದದ್ದರಿಂದ ಪೂರ್ಣವಾಗಿ ಮೂರು ಸೀಸೆ ಬ್ರಾಂಡಿಯಿಂದ ಸ್ಫೂರ್ತಿಗೊಂಡು ರಂಗದ ಮೇಲೆ ಹೋಗಿದ್ದೆ. ನನ್ನ ಪಾತ್ರ ನಾನು ಹೇಗೆ ಅಭಿನಯಿಸಿದೆನೋ ಆ ಅಲ್ಲಾನೇ ಬಲ್ಲ! ತೈಮೂರ್‌ಲೇನನ ಪಾತ್ರದವನು ನನ್ನ ಅಭಿನಯದ ಮುಂದೆ ತಬ್ಬಿಬ್ಬಾಗಿ ಹೋದ. ಅವನೂ ಒಮ್ಮೊಮ್ಮೆ ದಪ್ಪಗಂಟಲಿನಲ್ಲಿ ಕೂಗುತ್ತಿದ್ದ. ನಾನು ಅವನಿಗೂ ದಪ್ಪ ಗಂಟಲಿನಲ್ಲಿ ಕೂಗುತ್ತಿದ್ದೆ. ಜೊತೆಗೆ ನಾನಾ ತರಹೆಯ ಮುಖ ಭಂಗಿಗಳನ್ನು ಬೇರೆ ಪ್ರದರ್ಶಿಸುತ್ತಿದ್ದೆ. ಒಟ್ಟಿನಲ್ಲಿ ನಾನು ಹೊಕ್ಕಳ ಮೇಲೆ ಕೈ ಜೋಡಿಸಿಕೊಂಡು ಹೀಗೆ ನಿಂತೆ. ಸುಪ್ರಸಿದ್ಧ ನಾಟಕ ಮಂದಿರದಲ್ಲಿ ಹೀಗೆಯೇ ಅಭಿನಯಿಸುವುದು. ಇದು ನೋಡುವವರಿಗೆ ಒಳ್ಳೆಯ ಪರಿಣಾಮವನ್ನುಂಟುಮಾಡುತ್ತದೆ. ನಾನು ನನ್ನ ಅಭಿನಯಗಳನ್ನೆಲ್ಲ ಪ್ರದರ್ಶಿಸುವ ವೇಳೆಗೆ ಹೆಂಡ ಕೆಳ ಹೊಟ್ಟೆಗೆ ಇಳಿದಿತ್ತು. ಒಟ್ಟಿನಲ್ಲಿ ನಾನೊಬ್ಬ ಪ್ರತಿಭಾಶಾಲಿಯಾದ ನಟನಾಗಿ ಮೆರೆದೆ. ನನ್ನ ಅಭಿನಯವೆಂದರೆ ಕಲ್ಲು ಕೂಡಾ ಕರಗಿ ಮರ ಕೂಡಾ ತಲೆತೂಗುವಂತಾಯ್ತು. ನಾಟಕ ಮುಗಿದ ಮೇಲೆ ಊರಿನ ಗಣ್ಯ ಮಹನೀಯರೂ ಮಹಿಳೆಯರೂ ಬಣ್ಣದ ಕೋಣೆಗೆ ನುಗ್ಗಿ ನನ್ನನ್ನು ಅಭಿನಂದಿಸಿದರು. ಮಹನೀಯರು ನನ್ನ ಶಾರೀರವನ್ನು ಹೊಗಳಿದರು. ಮಹಿಳೆಯರು ನನ್ನ ಮೈಕಟ್ಟನ್ನು ಹೊಗಳಿದರು. ‘ನಾನು ಹೇಳಿದೇನೆ ನೋಡಿ!

ಮುಂದೆ ಯೂರೋಪಿನಲ್ಲೆಲ್ಲ ಅತ್ಯಂತ ಪ್ರಸಿದ್ಧರಾದ ನಟರಲ್ಲಿ ಈತ ಒಬ್ಬನೆಂದು ಪರಿಗಣಿಸಲ್ಪಡುತ್ತಾನೆ. ನನ್ನ ಭವಿಷ್ಯ ಖಂಡಿತ ಸುಳ್ಳಾಗುವುದಿಲ್ಲ. ಅಲ್ಲದೆ ನನಗೆ ಅಭಿನಯ ವಿಮರ್ಶೆಯೂ ತಕ್ಕ ಮಟ್ಟಿಗೆ ಗೊತ್ತಿದೆ ಎನ್ನಿ.' ಹೀಗೆಂದು ಊರ ಅಮಲ್ದಾರರ ಹೆಂಡತಿ ಹೇಳಿದಳು. ಮೊದಮೊದಲು ಹೊಗಳಿಕೆ ಸಾಕಷ್ಟು ಪ್ರಿಯವಾಗಿಯೇ ಇರುತ್ತದೆ. ಅಲ್ಲದೆ ನಾವು ಅದನ್ನು ಹಿರಿಯರ ಅನುಗ್ರಹವೆಂಬಂತೆ ಸ್ವೀಕರಿಸುತ್ತೇವೆ. ಅದೇ ಹೊಗಳಿಕೆ ಅತಿಯಾದರೆ ಅದನ್ನು ಒಂದು ತೆರನಾದ ಸಾಲವಾಗಿ ಸ್ವೀಕರಿಸುತ್ತೇವೆ. ಆ ಸಾಲದ ತೀರ್ಮಾನಕ್ಕಾಗಿ ನಾವು ಮತ್ತೆ ನಮ್ಮ ಪ್ರತಿಭೆಯಿಂದ ನಿರ್ಮಿಸಿದ ಕಲಾಸೃಷ್ಟಿಯನ್ನು ಅವರಿಗೆ ಕೊಡಬೇಕಾಗುತ್ತದೆ. ಅವರಿಗೆ ಪ್ರತಿವಂದನೆ ಸಲ್ಲಿಸುವ ಬದಲು ನಾನು ಒಳೊಳಗೇ ಬೆನ್ನು ತಟ್ಟಿಕೊಂಡೆ. ಅದೇ ನಾಟಕವನ್ನು ಎರಡನೆಯ ಸಲ ಆಡಬೇಕು ಎಂದರು. ನಾವು ಆಗಲಿ ಎಂದೆವು. ನನಗೆ ಮೊದಲಿಗಿಂತ ಹೆಚ್ಚಿನ ಕರತಾಡನಗಳು ಬಿದ್ದವು.

ಕೊನೆಗೆ ಆ ಊರು ಬಿಟ್ಟು ಅಲ್ಲಿಗೆ ಸಮೀಪದಲ್ಲಿ ಕುದುರೆ ಜೂಜು ನಡೆಯುತ್ತಿದ್ದ ಇನ್ನೊಂದು ಸ್ಥಳಕ್ಕೆ ಹೋದೆವು. ಈಗ ಕೃತಜ್ಞತೆಯ ಕಣ್ಣೀರು ಸುರಿಸದೆ ನಾನು ಟಿಂಟರ್‌ಜೆನ್ನನ್ನು ನೆನೆಯುವಂತಿಲ್ಲ. ನಾಟಕ ಕಲೆಯನ್ನೂ ಚೆನ್ನಾಗಿ ಅರಿತವರು; ವಿಮರ್ಶಿಸ ಬಲ್ಲವರು, ಅವರು. (ನಿಮಗೆ ಒಪ್ಪಿಗೆಯಾದರೆ ಬನ್ನಿ ಅವರ ಆರೋಗ್ಯಭಾಗ್ಯಕ್ಕೆ ಪಾನಮಾಡೋಣ!) ನಾವು ಆ ಊರು ಬಿಟ್ಟವಷ್ಟೆ! ಆ ಊರಿಗೆ ಹೋದದ್ದಕ್ಕೂ, ಬಿಟ್ಟದ್ದಕ್ಕೂ ಎಂತಹ ಅಂತರ. ಊರು ಸೇರಿದಾಗ ಮುಂಬತ್ತಿ ಕರಿಕಲು ಸರಿಮಾಡುವ ಆಳು. ಊರು ಬಿಡುವಾಗ ನಾಯಕ ಪಾತ್ರವಹಿಸುವ ಪ್ರಧಾನ ನಟ! ಪ್ರಪಂಚ ಎಂದರೆ ಇದೇ ಸ್ವಾಮಿ. ಇವತ್ತು ಅಲ್ಪವಾಗಿ

ಕಾಣುವುದು ನಾಳೆ ಬೃಹತ್ತಾಗಿ ಪರಿಣಮಿಸುತ್ತದೆ. ಈ ವಿಷಯ ಕುರಿತು ನಾನು ಎಷ್ಟೋ ಸಂಗತಿ ಹೇಳಬಲ್ಲೆ. ಮಾನವ ಜೀವನದ ಏಳುಬೀಳುಗಳನ್ನು ಕುರಿತು ವಿಚಾರ ಗರ್ಭಿತವಾದ ತತ್ವ ನಿರೂಪಣೆ ಮಾಡಬಲ್ಲೆ. ಆದರೆ ನಮ್ಮಿಬ್ಬರಿಗೂ ಅದು ತಲೆ ಬೇಸರವಾಗುತ್ತದೆಯಾಗಿ ಕಥೆ ಮುಂದುವರಿಸುತ್ತೇನೆ.

"ಕುದುರೆ ಜೂಜು ಮುಗಿಯುವ ವೇಳೆಗೆ ಆ ಊರು ಬಿಟ್ಟು ಬೇರೆ ಊರಿಗೆ ಹೋದೆವು. ಆ ಊರೇನೋ ನಮಗೆ ಸುಖವಾಗಿ ತೋರಲಿಲ್ಲ. ಬಂದಷ್ಟು ಬರಲಿ ಎಂದುಕೊಂಡು ನಾಟಕ ಹಾಕಿದೆವು. ಅಲ್ಲಿಯೂ ನಾನು ಮುಖ್ಯಪಾತ್ರಗಳನ್ನೇ ವಹಿಸುತ್ತ ಎಂದಿನಂತೆ ಪ್ರಭಾವಶಾಲಿಯಾದ ನಟನಾಗಿ ಮೆರೆದೆ. ದಿನದಿನಕ್ಕೆ ಬೆಳೆಯುತ್ತಿದ್ದ ನನ್ನ ಅಭಿನಯ ಕಲೆಗೆ ಒಳ್ಳೆಯ ಸಂಸ್ಕಾರ ದೊರೆತಿದ್ದರೆ ನಿಜವಾಗಿಯೂ ಯೂರೋಪಿನ ನಟ ಶ್ರೇಷ್ಠನಾಗುತ್ತಿದ್ದೆನೆಂದು ಇವತ್ತಿಗೂ ನಾನು ದೃಢವಾಗಿ ನಂಬಿದೇನೆ. ಆದರೆ ಆಕಸ್ಮಿಕವಾಗಿ ಸುರಿದ ಮಾಗಿಯ ಮಂಜಿನಿಂದ ವಿಕಸಿತವಾಗಬೇಕಾಗಿದ್ದ ನನ್ನ ಅಭಿನಯಕಲೆಯ ಕಮಲ ಪುಷ್ಪ ಮೊಗ್ಗಿನ ಅವಸ್ಥೆಯಲ್ಲಿಯೇ ಬಾಡಿಹೋಯಿತು. ಹೀಗಾಗಿ ನಾನು ಮತ್ತೊಮ್ಮೆ ಸಾಮಾನ್ಯದರ್ಜೆಯ ನಟನಾಗಿ ಉಳಿದು ಕೊಂಡೆ. 'ಸರ್ ಹ್ಯಾರಿ ವಿಲ್‌ಡೈರ್' ನ ಪಾತ್ರವನ್ನು ವಹಿಸಿದಾಗ ಹಳ್ಳಿಯ ಹೆಂಗಸರೆಲ್ಲ ಬೆರಗಾಗಿ ಹೋದರು. ನಾನು ನನ್ನ ಬೆಳ್ಳಿಯ ನಶ್ಯದ ಡಬ್ಬಿ ಹೊರತೆಗೆದಾಕ್ಷಣವೇ ಇಡೀ ಮಂದಿರಕ್ಕೆ ಮಂದಿರವೇ ಘೊಳ್ಳೆಂದು ನಕ್ಕಿತು.

ಆ ಊರಿನಲ್ಲಿ ಒಬ್ಬ ಹೆಂಗಸಿದ್ದಳು. ಅವಳು ಲಂಡನ್ನಿನಲ್ಲಿ ಒಂಭತ್ತು ತಿಂಗಳು ಇದ್ದು ಬಂದಿದ್ದಳು. ಅಷ್ಟರಿಂದಲೇ ಅವಳು ತಾನೊಬ್ಬ ಮಹಾ ಕಲಾಭಿರುಚಿಯುವಳೆಂದು ಹೇಳಿಕೊಳ್ಳು

ತ್ತಿದ್ದಳು. ಇದರಿಂದ ಅವಳು ಬಂದಲ್ಲೆಲ್ಲ ಕಲೆ, ನಾಟಕ, ಅಭಿನಯಾದಿಗಳಲ್ಲಿ ಅವಳದೇ ಪಾರುಪತ್ಯವಾಗಿಹೋಯಿತು. ಅವಳಿಗೆ ನನ್ನ ಕಲಾಕೌಶಲವನ್ನು ಜನ ತಿಳಿಸಿದರು. ಪ್ರತಿಯೊಬ್ಬರೂ ನನ್ನನ್ನು ಹೊಗಳಿದರು. ಆದರೂ ನನ್ನ ಅಭಿನಯವನ್ನು ನೋಡಲು ನಾಟಕಕ್ಕೆ ಬರುವುದಕ್ಕೆ ಅವಳು ಒಪ್ಪಲಿಲ್ಲ. "ಈ ತಿರಿಕೆಯ ನಾಟ್ಯವಿಲಾಸಿಯ ಹತ್ತಿರ ಒಳ್ಳೆಯ ಅಭಿನಯ ನೋಡಲು ಹೋಗಬೇಕೇ!" ಎಂದು ಹೇಳಿದಳು. ಗ್ಯಾರಿಕನ ಅಭಿನಯ ಎಷ್ಟು ಚೆನ್ನಾಗಿರುತ್ತದೆ ಎಂದು ಹೊಗಳಿದಳು. ನಟನಾದವನು ಹೇಗೆ ಮಾತನಾಡಬೇಕು, ದನಿ ಹೇಗೆ ಎತ್ತರಿಸಬೇಕು, ಹೇಗೆ ತಗ್ಗಿಸಬೇಕು, ಲಯಗತಿಗಳನ್ನು ಹೇಗೆ ಸಾಧಿಸಬೇಕು ಎಂಬೆಲ್ಲದರ ಬಗ್ಗೆ ಒಂದು ಸಣ್ಣ ಉಪನ್ಯಾಸ ಮಾಡಿ ತನ್ನ ಪ್ರೌಢಿಮೆಯಿಂದ ಆ ಮಕ್ಕಳನ್ನು ದಂಗುಬಡಿಸಿದಳು. ಕೊನೆಗೊಮ್ಮೆ ನಾಟಕಕ್ಕೆ ಹೋಗಲು ಒತ್ತಾಯ ಮಾಡಿದ್ದಾಯಿತು. ನನ್ನ ನಾಟಕ ನೋಡುವುದಕ್ಕೆ ಎಂತಹ ಪ್ರವೀಣೆ ಬರುತ್ತಾಳೆ ಎಂಬುದನ್ನು ನನಗೆ ಗುಟ್ಟಾಗಿ ಹೇಳಿದರು. ನಾನೇನೂ ಹೆದರಲಿಲ್ಲ. ಬ್ರೀಚಸಿನಲ್ಲಿ ಒಂದು ಕೈ ಎದೆ ಮೇಲೆ ಒಂದು ಕೈ ಹೀಗೆ ಮಾಡಿಕೊಂಡು ಡ್ರೂರಿಲೇನ್‌ನಲ್ಲಿ ಬರೋ ಹಾಗೆ ಬಂದೆ. ಆದರೆ ನನ್ನನ್ನು ನೋಡುವ ಬದಲು ಪ್ರೇಕ್ಷಕರೆಲ್ಲ ಲಂಡನ್ನಿನಲ್ಲಿ ಒಂಭತ್ತು ತಿಂಗಳು ಇದ್ದು ಬಂದಿದ್ದ ಆ ಹೆಂಗಸಿನ ಕಡೆಗೆ ನೋಡುತ್ತಿದ್ದರು. ನನ್ನ ಅಭಿನಯದಿಂದ ನನಗೇನು ನಟಸಾರ್ವಭೌಮನ ಪದವಿ ದೊರೆಯುತ್ತದೆಯೋ ಅಥವ ಬಾಗಿಲುಕಾಯುವ ಜವಾನನ ಪದವಿ ದೊರೆಯುತ್ತದೆಯೋ ಎಂಬುದನ್ನು ಆ ಹೆಂಗಸಿನ ತೀರ್ಮಾನದಿಂದ ಜನ ತಿಳಿಯಲು ಕಾತರರಾಗಿದ್ದರು. ನಾನು ನನ್ನ ನಶ್ಯದ ಡಬ್ಬಿ ತೆಗೆದೆ, ನಶ್ಯ ತೆಗೆದುಕೊಂಡೆ–ಆಕೆ ಗಂಭೀರವಾಗಿದ್ದಳು. ಪ್ರೇಕ್ಷ

ಕರೂ ಅವಳಂತೆಯೇ ಗಂಭೀರವಾಗಿದ್ದರು. ನಾನು ನನ್ನ ಲಾಠಿ ವರಸೆಗೆ ಪ್ರಾರಂಭ ಮಾಡಿದೆ. ಆದರೂ ಎಲ್ಲರೂ ಮ್ಲಾನವದನ ರಾಗಿ ನೀರವವಾಗಿದ್ದರು! ಕೊನೆಗೆ ಆ ಹೆಂಗಸು ಸಂಕಟದಿಂದ ನರಳಿದಳು. ನನ್ನ ಅಭಿನಯಕ್ಕೆ ಅಸಮ್ಮತಿ ಸೂಚಿಸುವಂತೆ ಗೋಣು ಅಲ್ಲಾಡಿಸಿದಳು. ನನಗೆ ನಾನೇ ಹ್ಹಿ ಹ್ಹಿ ಹ್ಹಿ ಹ್ಹಿ ಎಂದು ಕೊಂಡು ಇನ್ನೊಮ್ಮೆ ಅಭಿನಯಿಸಿದೆ, ಪ್ರೇಕ್ಷಕರ ತುಟಿಯಮೇಲೆ ಒಂದು ಮುಗುಳುನಗೆಯಾದರೂ ಮೂಡಲಿ ಎಂದು. ಒಂದೇ ಒಂದು ಗಲ್ಲದಲ್ಲಿಯಾದರೂ ಒಂದು ನಗೆಯ ಸುಳಿ ಮೂಡಿದ್ದರೆ ಕೇಳಿ! ಇದು ಉಪಯೋಗವಿಲ್ಲ ಎಂದುಕೊಂಡೆ. ನನ್ನ ಸ್ವಾಭಾವಿಕ ನಗೆ ಅಸಹಜವಾದ ನಗೆಯಾಯಿತು. ನಾನು ನಗುವಂತೆ ನಟಿಸುತ್ತಿದ್ದಂತೆಯೇ ನನ್ನ ಕಣ್ಣು ಎದೆಯಾಳದ ಸಂಕಟವನ್ನು ಪ್ರತಿಬಿಂಬಿಸುವಂತಾಯಿತು. ಒಟ್ಟಿನಲ್ಲಿ ಆ ಹೆಂಗಸು ನನ್ನ ಅಭಿನಯಕ್ಕೆ ಅತೃಪ್ತಿಪಟ್ಟುಕೊಂಡು ಬಂದಿದ್ದಳು. ಅತೃಪ್ತ ಳೇನೋ ಆದಳು, ಆದರೆ ಅವಳ ಅತೃಪ್ತಿಯೊಂದಿಗೆ ನನ್ನ ಕೀರ್ತಿಯೂ ಅಳಿಸಿಹೋಯಿತು. ನಾನು ಈಗ ಇಲ್ಲಿದೇನೆ. (ಗ್ಲಾಸಿನಲ್ಲಿ ಪಾನೀಯವೂ ಮುಗಿದುಹೋಯಿತು!)

# ಚಾರಲ್ಸ್ ಲ್ಯಾಂಬ್

## ಕನಸಿನ ಮಕ್ಕಳು

ಚಿಕ್ಕಮಕ್ಕಳಿಗೆ ದೊಡ್ಡವರ ವಿಷಯದಲ್ಲಿ ಅವರು ಚಿಕ್ಕವರಾಗಿದ್ದಾಗ ಹೇಗಿದ್ದರು ಏನು ಮಾಡಿದರು ಎನ್ನುವ ಕಥೆಗಳನ್ನು ಕೇಳುವುದು ಎಂದರೆ ತುಂಬ ಪ್ರೀತಿ. ತಾವು ಎಂದೂ ಕಂಡರಿಯದ ದೊಡ್ಡಪ್ಪ ದೊಡ್ಡಜ್ಜಿಯರ ವಿಷಯವಾಗಿ ನಾನಾ ತೆರನಾಗಿ ಮನಸ್ಸಿನಲ್ಲಿಯೇ ಊಹಿಸಿಕೊಳ್ಳುವುದು ಎಂದರಂತೂ ಅವರಿಗೆ ಎಲ್ಲಿಲ್ಲದ ಉತ್ಸಾಹ. ಈ ಬಗೆಯ ಉತ್ಸಾಹದಿಂದ ಮೊನ್ನೆ ಸಂಜೆ ನನ್ನ ಚಿಕ್ಕಮಕ್ಕಳು ತಮ್ಮ ಮುತ್ತಜ್ಜಿ ಫೀಲ್ಡಳ ಕಥೆ ಕೇಳುವುದಕ್ಕೆ ಕಾತರರಾಗಿ ನನ್ನ ಬಳಿಗೆ ಮೆಲ್ಲಗೆ ಓಡಿ ಬಂದರು. ನಾನು ಕಥೆ ಹೇಳಿದೆ. ಮುತ್ತಜ್ಜಿ ವಾಸವಾಗಿದ್ದದ್ದು ನಾರ್ಫೋಕಿನ ಒಂದು ಮಹಡಿ ಮನೆಯಲ್ಲಿ. ಈ ಮನೆ ನಾವು ವಾಸವಾಗಿರುವ ಮನೆಗಿಂತ ನೂರುಪಾಲು ದೊಡ್ಡದಾದ ಭಾರಿ ಮನೆ. ನೀವು ಪುಟ್ಟಮಕ್ಕಳು ಇತ್ತೀಚೆಗೆ ಕಲಿತಿರುವ 'ಕಾಡುಪಾಲಾದ ಕಂದಮ್ಮಗಳು' ಎಂಬ ಹಾಡಿನಲ್ಲಿ ಬರುವ ಕಥೆಯ ದುರ್ಘಟನೆ ನಡೆದದ್ದು ಈ ನಾರ್ಫೋಕಿನಲ್ಲಿಯೇ. ಹಾಗೆಂದು ಜನಸಾಮಾನ್ಯರ ನಂಬಿಕೆ. ನಿಜವಾಗಿಯೂ ಆ ಹಾಡಿನಲ್ಲಿ ಬರುವ ಹಾಗೆ ಹಕ್ಕಿಗಳು ಕಳೆದು ಹೋದ ಮಕ್ಕಳನ್ನು ಎಲೆಗಳಿಂದ ಮುಚ್ಚಿದವು ಎಂಬಲ್ಲಿಯವರೆಗೆ ಆ ಮಕ್ಕಳ ಮತ್ತು ಅವರ ಕ್ರೂರಿಯಾದ ಚಿಕ್ಕಪ್ಪನ ಕಥೆಯನ್ನು ಆ ದೊಡ್ಡ ಮನೆಯ ಶಾಖದ ಒಲೆಯ ಮೇಲ್ಭಾಗದಲ್ಲಿ ಮರದಲ್ಲಿ ಲಕ್ಷಣವಾಗಿ ಕೊರೆದಿದ್ದರು. ಆದರೆ ಯಾವನೋ ಒಬ್ಬ ಮೂರ್ಖ ಸಾಹುಕಾರ ಆ ಮರದ ಅಲಂಕಾರದ ಹೊಗೆ ಕೊಳವಿಗಳನ್ನು

ಕೆಡವಿಸಿ ಅವುಗಳ ಸ್ಥಾನದಲ್ಲಿ ಯಾವ ಕಥೆಯನ್ನೂ ಕೊರೆಯಿಸದೆ ಹೊಸರೀತಿಯಲ್ಲಿ ಸುಣ್ಣಕಲ್ಲಿನಲ್ಲಿ ಕೊಳವಿ ಕಟ್ಟಿಸಿದ. ಹೀಗೆ ಹೇಳಿದಾಗ ಆ್ಯಲಿಸ್, ಸಾಹುಕಾರನ ವರ್ತನೆಯನ್ನು ಖಂಡಿಸುವ ರೀತಿಯಲ್ಲಿ ತನ್ನ ಪ್ರೀತಿಯ ತಾಯಿಯ ಕುಡಿ ನೋಟದಂತೆ ಒಮ್ಮೆ ನೋಡಿದಳು. ಆದರೂ ಆಕೆ ಚಿಕ್ಕವಳಿದ್ದುದರಿಂದ ಅವಳ ನೋಟ ತೀರ ಖಂಡನೆಯ ನೋಟವೆಂದು ಹೇಳುವಂತಿರಲಿಲ್ಲ. ಆಮೇಲೆ ನಾನು ಕಥೆ ಮುಂದುವರಿಸುತ್ತ ಅವರ ಮುತ್ತಜ್ಜಿ ಎಂತಹ ಪುಣ್ಯಾತ್ಮಳು, ಎಷ್ಟೊಂದು ಒಳ್ಳೆಯವಳು, ನೆರೆಹೊರೆಯವರೆಲ್ಲ ಹೇಗೆ ಅವಳನ್ನು ಗೌರವದಿಂದಲೂ, ಪ್ರೀತಿಯಿಂದಲೂ ಕಾಣುತ್ತಿದ್ದರು, ಮುತ್ತಜ್ಜಿಯೇ ಮನೆಯ ಯಜಮಾನಿಯಲ್ಲದಿದ್ದರೂ ಹೇಗೆ ಒಂದು ರೀತಿಯಲ್ಲಿ ಯಜಮಾನಿಯೇ ಆಗಿದ್ದಳು, ನಿಜವಾದ ಮನೆಯ ದಣಿ ಹೆಚ್ಚು ನವೀನವೂ, ಮಾದರಿಯೂ ಆದ ಸಮೀಪದ ಜಿಲ್ಲೆಯಲ್ಲಿ ಕೊಂಡುಕೊಂಡ ತನ್ನ ಹೊಸ ಬಂಗಲೆಯಲ್ಲಿ ವಾಸಿಸಲು ಇಷ್ಟಪಟ್ಟದ್ದರಿಂದ ಈಕೆಯನ್ನು ಮೇಲ್ವಿಚಾರಕಳನ್ನಾಗಿ ನಿಯಮಿಸಿ ಹೋಗಿದ್ದರೂ ಈ ಮುತ್ತಜ್ಜಿ ಮನೆ ತನ್ನದೆ ಆಗಿದ್ದರೆ ಹೇಗೋ ಹಾಗೇ ಅಲ್ಲಿ ವಾಸವಾಗಿದ್ದಷ್ಟು ದಿನವೂ ಅದನ್ನು ಆ ಮನೆಯ ಅಂತಸ್ತಿಗೆ ತಕ್ಕ ಗೌರವಘನತೆಗಳಿಗೆ ಊಣೆಯವಾಗದಂತೆ ಅಚ್ಚುಕಟ್ಟಾಗಿ ಹೇಗೆ ಇಟ್ಟುಕೊಂಡಿದ್ದಳು, ಅವಳ ಕಾಲವಾದ ಮೇಲೆ ಆ ಮನೆ ಪಾಳಾಗಿ ಕುಸಿದು ಬಿದ್ದಾಗ ಅದರ ಅಮೂಲ್ಯವಾದ ಅಲಂಕಾರಗಳನ್ನೆಲ್ಲ ದಣಿಯ ಹೊಸಮನೆಗೆ ಕಳಚಿಕೊಂಡು ಹೋಗಿ ಹೇಗೆ ಅಲ್ಲಿ ಅವುಗಳನ್ನು ಅಳವಡಿಸಿದರು ಎಂದೂ ಅವು ಅಲ್ಲಿ ಯಾರಾದರೂ ವೆಸ್ಟ್ಮಿನಿಸ್ಟರ್ ಅಬೆಯಿಂದ ತಾವು ನೋಡಿದ ಸಮಾಧಿಗಳನ್ನು ಕಿತ್ತುಕೊಂಡು ಹೋಗಿ ಆಡಂಬರದ ರೀತಿಯಲ್ಲಿ ಶೃಂಗಾರ ಮಾಡಿರುವ

ಮಹಿಳೆಯ ಡ್ರಾಯಿಂಗ್ ರೂಮಿನಲ್ಲಿ ಜೋಡಿಸಿದರೆ ಆಭಾಸವಾಗಿ ಕಾಣುವಂತೆ ಹೇಗೆ ವಿಕೃತವಾಗಿ ತೋರಿದವು ಎಂದೂ ಹೇಳಿದೆ. ಹೀಗೆ ಹೇಳಿದಾಗ ಜಾನ್ 'ನಿಜವಾಗಿಯೂ ಎಂಥ ಮೂರ್ಖಳ ಕೆಲಸ ಮಾಡಿದರು ಅಣ್ಣ' ಎಂದು ಹೇಳುವವನಂತೆ ಮುಗುಳು ನಗೆ ನಕ್ಕ. ಹಾಗೆಯೇ ಕಥೆಯನ್ನು ಮುಂದುವರಿಸುತ್ತ ಮುತ್ತಜ್ಜಿ ಸತ್ತಾಗ ಅವಳ ಶ್ಮಶಾನಯಾತ್ರೆಯಲ್ಲಿ ಅವಳಿಗೆ ಗೌರವ ಸಲ್ಲಿಸುವ ಸಲುವಾಗಿ ಬಡವರೂ ಕುಲೀನರನೇಕರೂ ಹೇಗೆ ಹಲವಾರು ಮೈಲಿಗಳ ದೂರ ಮೆರವಣಿಗೆಯಲ್ಲಿ ಭಾಗಿಗಳಾಗಿದ್ದರು, ಇದಕ್ಕೆಲ್ಲ ಹೇಗೆ ಅವಳ ಒಳ್ಳೆಯ ಗುಣವೂ ಧರ್ಮಬುದ್ಧಿಯೂ ಕಾರಣ ವಾಗಿದ್ದಿತು, ಹೇಗೆ ಅವಳಿಗೆ ಬೈಬಲ್ಲಿನ ಸ್ತೋತ್ರಗೀತೆಗಳೆಲ್ಲ ಬಾಯಿಪಾಠವಾಗಿತ್ತು, ಎಂದೂ ಹೇಳಿದೆ. ಹೀಗೆ ಹೇಳಿದಾಗ ಚಿಕ್ಕಮಗು ಆ್ಯಲಿಸ್ ಕೈಬೆರಳುಗಳನ್ನು ಅಗಲಮಾಡಿಕೊಂಡಳು. ಆಮೇಲೆ ಕಥೆ ಮುಂದುವರಿಸುತ್ತ ಅವರ ಮುತ್ತಜ್ಜಿ ಒಂದು ಕಾಲಕ್ಕೆ ಎಂತಹ ನೀಳವೂ ಉನ್ನತವೂ ಆದ ಆಕಾರದ ಸ್ಫುರದ್ರೂಪಿಣಿಯೂ ಗಂಭೀರವಾದ ಮುಖಮುದ್ರೆಯ ತೇಜಸ್ವಿನಿಯೂ ಆಗಿದ್ದಳು ಎಂದೂ ಆಕೆ ತನ್ನ ಪ್ರಾಯದ ಕಾಲದಲ್ಲಿ ಎಂತಹ ಪ್ರಸಿದ್ಧಳಾದ ನರ್ತಕಿಯಾಗಿದ್ದಳು ಎಂದೂ ಹೇಳಿದೆ. ಈ ಮಾತು ಕೇಳಿದಾಗ ಆ್ಯಲಿಸಳ ಚಿಕ್ಕ ಬಲಗಾಲು ಅನೈಚ್ಛಿಕವಾಗಿ ಕುಣಿದಾಡುವ ಪದಗತಿಯಲ್ಲಿ ತೊಡಗಿದ್ದು ನಾನು ಗಂಭೀರವಾಗಿ ಒಮ್ಮೆ ನೋಡಿದ ಕೂಡಲೆ ತಟಕ್ಕನೆ ನಿಂತುಹೋಯಿತು. ಸುಪ್ರಸಿದ್ಧ ನರ್ತಕಿಯೆಂದು ನಾನು ಹೇಳುತ್ತಿದ್ದೆನಷ್ಟೆ. ಹೀಗಿರುವಾಗ 'ಕ್ಯಾನ್ಸರ್' ಎಂಬ ಒಂದು ಘೋರರೋಗ ಬಂದು ಮುತ್ತಜ್ಜಿ ಬೇನೆ ತಿಂದು ಬಗ್ಗಿಹೋದಳು. ಆದರೇನು! ಅವಳ ಸದ್ಗುಣಗಳನ್ನು ರೋಗ ಬಗ್ಗಿಸಲಾಗಲಿಲ್ಲ. ಅವೂ ಜಗ್ಗಲಿಲ್ಲ. ಆಕೆ ಒಳ್ಳೆಯ ಧರ್ಮ

ನಿರತಳಾದ ಹೆಂಗಸಾದ್ದರಿಂದಲೇ ಅವಳ ಗುಣಗಳು ಎಂದಿನಂತೆ ಉನ್ನತೋನ್ನತವಾಗಿಯೇ ಇದ್ದವು. ಕಥೆ ಮುಂದುವರಿಸುತ್ತ ಮುತ್ತಜ್ಜಿ ಹೇಗೆ ಒಬ್ಬಳೇ ಒಬ್ಬಳು ಆ ದೊಡ್ಡ ಒಂದೇ ಒಂದು ಮನೆಯಲ್ಲಿ ಆ ಒಂಟಿ ಕೋಣೆಯಲ್ಲಿ ರಾತ್ರಿ ಮಲಗುತ್ತಿದ್ದಳು ಎಂದೂ ಅವಳು ಮಲಗುತ್ತಿದ್ದ ಸ್ಥಳದ ಸಮೀಪದಲ್ಲಿಯೇ ಮಹಡಿಯ ಮೆಟ್ಟಲುಗಳ ಮೇಲೆ ಎರಡು ಸಣ್ಣ ಮಕ್ಕಳ ಪ್ರೇತಚ್ಛಾಯೆ ಮೇಲಿನಿಂದ ಕೆಳಕ್ಕೂ ಕೆಳಗಿನಿಂದ ಮೇಲಕ್ಕೂ ಹತ್ತಿ ಇಳಿಯುತ್ತಿದ್ದಂತೆ ಮುತ್ತಜ್ಜಿಗೆ ಕಾಣುತ್ತಿದ್ದುದನ್ನೂ ಆದರೂ ಆ ಚಿಕ್ಕ ಮಕ್ಕಳು ತನಗೇನೂ ತೊಂದರೆಮಾಡುವುದಿಲ್ಲ ಎಂದು ಆಕೆ ಹೇಳುತ್ತಿದ್ದುದನ್ನೂ ಆ ದಿವಸಗಳಲ್ಲಿ ನನಗೆ ಅನತಿ ದೂರದಲ್ಲಿಯೇ ಮನೆಯ ಪರಿಚಾರಿಕೆ ಮಲಗಿರುತ್ತಿದ್ದರೂ ಮುತ್ತಜ್ಜಿಯ ಅರ್ಧದಷ್ಟು ಕೂಡ ದೈವಭಕ್ತಿಯಾಗಲಿ ಸದ್ಗುಣ ನಿಷ್ಠೆಯಾಗಲಿ ನನ್ನಲ್ಲಿ ಇಲ್ಲದಿದ್ದುದರಿಂದ ನನಗೆ ಹೇಗೆ ದಿಗಿಲಾಗುತ್ತಿತ್ತೆಂದೂ ಆದರೂ ನಾನು ಚಿಕ್ಕಮಕ್ಕಳನ್ನು ನೋಡಿಲ್ಲವೆಂದೂ ಹೇಳಿದೆ. ಹೀಗೆ ಹೇಳಿದಾಗ ಜಾನ್ ಹುಬ್ಬುಗಳನ್ನು ಎತ್ತರಿಸಿ, ಬಿತ್ತರಿಸಿ ತಾನು ಮಹಾಶೂರನಾಗಿ ಕಾಣಿಸಕೊಳ್ಳಲು ಪ್ರಯತ್ನ ಮಾಡಿದ. ಕಥೆ ಮುಂದುವರಿಸುತ್ತ ಮುತ್ತಜ್ಜಿಗೆ ಮೊಮ್ಮಕ್ಕಳನ್ನು ಕಂಡರೆ ಎಂತಹ ಆಸೆ, ಎಷ್ಟೊಂದು ಅಕ್ಕರೆ, ರಜ ಬಂದಾಗ ನಮ್ಮೆಲ್ಲರನ್ನೂ ತನ್ನ ದೊಡ್ಡ ಮನೆಗೆ ಹೇಗೆ ಕರೆಸಿಕೊಳ್ಳುತ್ತಿದ್ದಳು ಎಂದೂ ಆ ದೊಡ್ಡ ಮನೆಯಲ್ಲಿ ಮುಖ್ಯವಾಗಿ ನಾನು ಒಬ್ಬನೇ ಹೇಗೆ ಅಡ್ಡಾಡುತ್ತ ರೋಮ್ ನಗರದಚಕ್ರವರ್ತಿಗಳಾಗಿದ್ದ ಹನ್ನೆರಡು ಮಂದಿ ಸೀಸರರ ಅರ್ಧಾಕೃತಿಯ ಶಿಲಾಪ್ರತಿಮೆಗಳನ್ನು ನಿಟ್ಟಿಸುತ್ತ ಅದು ಜೀವತಾಳಿ ಎದ್ದು ಬರುವಂತೆ ತೋರುವವರೆಗೂ ಅಥವಾ ನಾನೇ ಅವುಗಳಂತೆ ಶಿಲಾಪ್ರತಿಮೆಯಾಗಿ ಮೈಮರೆಯುವವರೆಗೂ ಗಂಟೆ

ಗಟ್ಟಲೆ ಅವುಗಳ ಮುಂದೆ ಕಾಲಕಳೆಯುತ್ತಿದ್ದೆನೆಂದೂ ಅನಾಕಾ ನೇಕ ತೆರನಾದ ಕೋಣೆಗಳಿಂದಲೂ ಅಲ್ಲಲ್ಲಿ ಹರಿದು ತೂಗಾಡು ತ್ತಿರುವ ತೆರೆಮರೆಗಳಿಂದಲೂ ಪಟಪಟನೆ ಹಾರಾಡುತ್ತಿರುವ ಚಿತ್ರನೆಯ್ದ ಜವನಿಕೆಗಳಿಂದಲೂ ಕೆಲವೆಡೆ ಗಿಲೀಟು ಅಳಿಸಿಹೋದ ಓಕ್ ಮರದ ಚಿತ್ರಫಲಕಗಳಿಂದಲೂ ಭವ್ಯವಾಗಿ ತೋರುತ್ತಿದ್ದ ಆ ಬೃಹತ್ಸೌಧವನ್ನು ನಾನು ಸಂತೋಷದಿಂದ ಅನಾಯಾಸವಾಗಿ ಬಳಿಸಿ ಬರುತ್ತಿದ್ದೆನೆಂದು ಆ ಮಹಡಿಯ ಮನೆಯ ಅಂಗಳದ ವಿಶಾಲವಾದ ತೋಟದಲ್ಲಿ ಆಗಾಗ ಎದುರಿಗೆ ಬರುವ ತೋಟದ ಕೆಲಸಗಾರನೊಬ್ಬನ ವಿನಾ ನಾನೇ ಸಾರ್ವ ಭೌಮನೆಂಬಂತೆ ಏಕಾಕಿಯಾಗಿ ವಿಹರಿಸುತ್ತಿದ್ದೆನೆಂದೂ ಅಲ್ಲಿಯ ಗೋಡೆಗಳ ಮೇಲೆ ನೆಕ್ಟರೀನ್ ಪೀಚ್ ಮೊದಲಾದ ಹಣ್ಣುಗಳು ತೂಗಾಡುತ್ತಿದ್ದರೂ ಅವುಗಳನ್ನು ತಿನ್ನಬಾರದೆಂದು ಹಿರಿಯರು ನಿಷೇಧಿಸಿದ್ದರಿಂದ ನಾನು ಅವುಗಳನ್ನು ಕೀಳುವುದಕ್ಕೂ ಅಪೇಕ್ಷೆ ಪಡುತ್ತಿರಲಿಲ್ಲವೆಂದೂ ದುಮ್ಮಾನಗೊಂಡಂತೆ ತೋರುವ ಹಳೆಯ ಯ್ಯೂ ಮರಗಳ ಸಾಲುಗಳಲ್ಲಿಯಾಗಲೀ ಫರ್ ಮರಗಳ ತೋಪು ಗಳಲ್ಲಿಯಾಗಲೀ ಅಲೆದಾಡುತ್ತ ಯಾವ ಉಪಯೋಗಕ್ಕೂ ಬಾರದೆ ನೋಡುವುದಕ್ಕೆ ಮಾತ್ರ ಚಂದಕಾಣುವ ಕೆಂಪು ಬೆರ್ರಿಗಳನ್ನೂ ಫರ್ ಫಲಗಳನ್ನೂ ಕೀಳುತ್ತ—ಇಲ್ಲವೆ ಕಿತ್ತಳೆಹಣ್ಣುಗಳನ್ನು ಮಾಗಿಸುವ ಯಂತ್ರಾಲಯಗಳಲ್ಲಿ ಚಳಿಕಾಯಿಸುತ್ತ ಆ ಹಿತಕರ ವಾದ ಸೆಕೆಯ ಆವರಣದಲ್ಲಿ ನಾನೂ ಆ ಹಣ್ಣುಗಳಂತೆ ಮಾಗುವ ವರೆಗೂ ಒಳಗಿರುತ್ತ—ಇಲ್ಲವೆ ತೋಟದ ಕೆಳಗಡೆ ತಿಳಿಗೊಳದಲ್ಲಿ ಸಣ್ಣ ಮೀನು ಚುಳಕ್ ಪುಳಕ್ ಎಂದು ಅಲ್ಲಿಂದಿಲ್ಲಿಗೆ ಪಳಂಚಿ ಚಿಮ್ಮುತ್ತಿರುವುದನ್ನೂ ಅವುಗಳ ಈ ಎಗರಾಟವನ್ನು ನಿರರ್ಥಕ ವೆಂಬಂತೆ ಅವಜ್ಞೆಗೈಯುವ ನೀರವ ನೋಟದಿಂದ ನಡುನೀರಿ

ನಲ್ಲಿ ಅಲ್ಲಲ್ಲಿ ತೂಗಾಡುವ ಮ್ಲಾನಮುಖಿಗಳಾದ ಹೊಟ್ಟೆಬಾಕ
ದೊಡ್ಡವಿಮಾನುಗಳನ್ನೂ ನೋಡುತ್ತ—ಕಾಲಕಳೆಯುವುದರಲ್ಲಿ
ನನಗೆ ಹೆಚ್ಚಿನ ಸಂತೋಷವಾಗುತ್ತಿತ್ತು ಎಂದು ಸಾಮಾನ್ಯವಾಗಿ
ಮಕ್ಕಳು ಆಸೆಪಡುವ ಮಧುರವಾದ ಕಿತ್ತಳೆ, ಪೀಚ್, ನೆಕ್ಟ್ರೀನ್
ಮುಂತಾದ ಹಣ್ಣುಗಳಿಗಿಂತಲೂ ನನಗೆ ಇಂತಹ ವಿನೋದ
ಗಳಿಂದಲೆ ಹೆಚ್ಚಿನ ಆಸೆ ಎಂದೂ ಹೇಳಿದೆ. ಈ ಮಾತು ಹೇಳುವ
ವೇಳೆಗೆ ಜಾನ್, ತಟ್ಟೆಯೊಳಗೆ ಇದ್ದ ಒಂದು ದ್ರಾಕ್ಷಿಗೊಂಚ
ಲನ್ನು ಗುಟ್ಟಾಗಿ ತೆಗೆದುಕೊಂಡಿದ್ದು—ಇದನ್ನು ಲ್ಯಾಲಿಸ್
ನೋಡದೆ ಇರಲಿಲ್ಲ—ಲ್ಯಾಲಿಸಳೊಡನೆ ಸಮನಾಗಿ ಹಂಚಿಕೊಂಡು
ತಿನ್ನಬೇಕೆಂದಿದ್ದವನು ಮೆತ್ತಗೆ ಆ ಗೊಂಚಲನ್ನು ಮತ್ತೆ ತಟ್ಟೆಯ
ಮೇಲೆಯೆ ಇಟ್ಟುಬಿಟ್ಟ. ಅಲ್ಲದೆ ಇಬ್ಬರೂ ಸದ್ಯಕ್ಕೆ ಆ ವಿಷಯ
ತಮಗೆ ಅಪ್ರಕೃತವೆಂಬಂತೆ ಅದನ್ನು ತೊರೆದು ಬಿಡುವುದಕ್ಕೆ
ಪನ್ನಿತಿಸಿದ್ದುದು ಕಂಡುಬಂತು. ಕಥೆ ಮುಂದುವರಿಸುತ್ತ
ಸ್ವಲ್ಪ ಎತ್ತರದ ದನಿಯಲ್ಲಿ, ಹೇಗೆ ಮುತ್ತಜ್ಜಿ ಎಲ್ಲ ಮೊಮ್ಮಕ್ಕ
ಳನ್ನೂ ಒಂದೇ ವಿಧವಾದ ಪ್ರೀತಿಯಿಂದ ನೋಡಿಕೊಳ್ಳು
ತ್ತಿದ್ದರೂ ಅವರ ದೊಡ್ಡಪ್ಪ ಜಾನ್ ಎಲ್—ನನ್ನು ಮಾತ್ರ
ಸ್ವಲ್ಪ ವಿಶೇಷವಾಗಿ ಅಕ್ಕರೆಯಿಂದಲೇ ಕಾಣುತ್ತಿದ್ದಳೆಂದು
ಹೇಳಬಹುದಾಗಿದೆ ಎಂದೂ ಇದಕ್ಕೆ ಕಾರಣವೇನೆಂದರೆ ನಿಮ್ಮ
ದೊಡ್ಡಪ್ಪ ನೋಡುವುದಕ್ಕೆ ಒಳ್ಳೆಯ ಲಕ್ಷಣವಾಗಿದ್ದ ಉತ್ಸಾಹ
ಭರಿತನಾದ ಯುವಕನಾಗಿದ್ದನಲ್ಲದೆ ಉಳಿದ ನಮ್ಮೆಲ್ಲರಿಗೆ ರಾಜ
ನಾಗಿದ್ದ ಎಂದೂ ಮಂಕುಹಿಡಿದವನ ಹಾಗೆ ನಿಸ್ಸಂಗನಾಗಿ ಮೂಲೆ
ಮೂಲೆ ಸೇರಿಕೊಳ್ಳದೆ ಇನ್ನೂ ಸಣ್ಣ ಹುಡುಗನಾಗಿದ್ದಾಗಲೇ
ಎಂಥ ತುಂಟ ಕುದುರೆಯನ್ನಾದರೂ ಏರಿಕೊಂಡು ತಾನು ಆ
ಕುದುರೆಗಿಂತ ಏನೂ ದೊಡ್ಡವನಲ್ಲದಿದ್ದರೂ ಕುದುರೆ ಸವಾರಿ

ಮಾಡುತ್ತ ನರಿ ಬೇಟೆಗೆ ಹೊರಟ ಬೇಟೆಗಾರರನ್ನು ಹೋಗಿ ಸೇರಿ ಕೊಳ್ಳುತ್ತಿದ್ದನು ಎಂದೂ ಇಷ್ಟಾದರೂ ಆ ಹಳಿಯ ಮಹಡಿಯ ಮನೆಯನ್ನೂ ತೋಟಗಳನ್ನೂ ಕಂಡರೆ ಆಸೆಯಿದ್ದರೂ ಸ್ವಭಾವತಃ ಅವುಗಳ ಗಡಿಯೊಳಗೆ ಸೆರೆಯಾಗಿ ಇರಲಾರದಂತಹ ಚಟುವಟಿಕೆಯ ಜೀವ ಅದು ಎಂದೂ ಹೀಗೆಯೆ ದೊಡ್ಡಪ್ಪ ಲಕ್ಷಣವಾಗಿದ್ದಂತೆಯೇ ಧೀರೋದಾತ್ತನಾಗಿ ಹೇಗೆ ಎಲ್ಲರ ಮುಖ್ಯವಾಗಿ ಮುತ್ತಜ್ಜಿಯ ಮೆಚ್ಚಿಕೆಗೆ ಪಾತ್ರನಾಗಿ ಬೆಳದನೆಂದೂ ನಾನು ಕುಂಟನಾಗಿ ನೋವಿನಿಂದ ನಡೆಯಲಾರದವನಾಗಿದ್ದಾಗ ತಾನೇ ಹೇಗೆ ಬೆನ್ನಮೇಲೆ ನನ್ನನ್ನು ಏರಿಸಿಕೊಂಡು—ನನಗಿಂತ ಆತ ಸ್ವಲ್ಪ ದೊಡ್ಡವನು—ಅನೇಕ ಮೈಲಿಗಳವರೆಗೆ ಹೋಗುತ್ತಿದ್ದ ಎಂದೂ ಕೆಲವು ವರ್ಷಗಳಾದ ಮೇಲೆ ಅವನೂ ಹೇಗೆ ಕುಂಟನಾದನೆಂದೂ ಆತ ಅಸಹನೀಯವಾದ ನೋವಿನಲ್ಲಿದ್ದಾಗ ನಾನು ಅವನಿಗೆ ಸಲ್ಲಿಸಬೇಕಾದ ಸೇವೆ ಸಲ್ಲಿಸದೆ ಹೋದೆನೆಂಬ ಭೀತಿ ನನಗಿದೆಯಲ್ಲದೆ ನಾನು ಕುಂಟುತ್ತಿದ್ದಾಗ ಆತ ನನ್ನ ವಿಷಯದಲ್ಲಿ ಎಷ್ಟೊಂದು ದಾಕ್ಷಿಣ್ಯಪರನಾಗಿದ್ದನೆಂಬುದನ್ನೂ ಸರಿಯಾಗಿ ನೆನೆಯಲಿಲ್ಲ ಎಂದೂ ಅವನು ಸತ್ತಾಗ ಸತ್ತು ಇನ್ನೂ ಒಂದು ಗಂಟೆ ಕೂಡ ಆಗಿರಲಿಲ್ಲ, ಆಗಲೇ ಆತ ಸತ್ತು ಎಷ್ಟೋ ಹೊತ್ತಾಗಿ ಹೋಯಿತೆಂಬ ಭಾವನೆ ನನಗೆ ಆಯಿತು. ಸಾವಿಗೂ ಬದುಕಿಗೂ ನಡುವೆ ಅಷ್ಟೊಂದು ದೂರವಿದೆ ಎಂದೂ ನಾನು ಅವನ ಸಾವಿನ ಸಂಕಟವನ್ನು ಹೇಗೆ ಸಹಿಸಬಲ್ಲವನಾಗಿದ್ದೇನೆ ಎಂದೂ ಮೊದಮೊದಲು ನನಗೆ ಎನಿಸಿತಾದರೂ ಕೊನೆಗೆ ಅವನ ಯೋಚನೆ ಮೇಲಿಂದಮೇಲೆ ನನ್ನ ಮನಸ್ಸಿನಲ್ಲಿ ಸುಳಿದಾಡಲು ತೊಡಗಿತು. ನಾನೇ ಸತ್ತಿದ್ದರೆ ಅವನು ಮಾಡುವ ಹಾಗೆ ಅಥವಾ ಇತರ ಅನೇಕರು ಮಾಡುವ ಹಾಗೆ ನಾನು ಅವನ ಸಾವಿಗೆ ಅಳದಿದ್ದರೂ

ಅದನ್ನು ಅಷ್ಟಾಗಿ ಮನಸ್ಸಿಗೆ ಹಚ್ಚಿಕೊಳ್ಳದಿದ್ದರೂ ದಿನವೆಲ್ಲ ನನಗೆ ಅವನ ಸಂಗದ ಅಭಾವದ ನೆನಪಾಗಿ ಅವನನ್ನು ಕಳೆದು ಕೊಂಡ ಕೊರೆಯುಂಡೆ. ಅದುವರೆಗೂ ನಾನು ಅವನನ್ನು ಎಷ್ಟೊಂದು ಪ್ರೀತಿಸುತ್ತಿದ್ದೆ ಎಂಬುದೇ ನನಗೆ ಗೊತ್ತಿರಲಿಲ್ಲ. ನಾನು ಅವನ ಪ್ರೀತಿಯನ್ನು ಕಳೆದುಕೊಂಡೆ. ನಾನು ಅವನ ಕೋಪವನ್ನು ಕಳೆದುಕೊಂಡೆ. ಅವನೇ ಇಲ್ಲದಿರುವುದಕ್ಕಿಂತ ಅವನು ಪುನಃ ಜೀವಂತನಾಗಿ ಬರಬೇಕೆಂದೂ ಅವನೊಡನೆ ಜಗಳವಾದರೂ ಆಡುತ್ತಿರಬೇಕೆಂದೂ (ನಾವು ಆಗಾಗ ಜಗಳ ವಾಡುತ್ತಿದ್ದುದೂ ಉಂಟು) ನಾನು ಬಯಸಿದೆ. ಡಾಕ್ಟರು ಅವನ ಕಾಲು ಕತ್ತರಿಸಿ ಹಾಕಿದಾಗ ಅವರ ದೊಡ್ಡಪ್ಪ ಪಾಪ, ಹೇಗೆ ಸಂಕಟಪಟ್ಟುಕೊಂಡನೋ! ಈಗ ನಾನು ಅವನಿಲ್ಲದೆ ಹಾಗೆಯೇ ಸಂಕಟಪಡುತ್ತಿದ್ದೇನೆ ಎಂದೂ ಹೇಳಿದೆ. ಹೇಳುತ್ತಿದ್ದ ಹಾಗೆಯೇ ಇಬ್ಬರು ಮಕ್ಕಳೂ ಬಿಕ್ಕಿ ಬಿಕ್ಕಿ ಅಳುತ್ತ ತಮ್ಮ ದೊಡ್ಡಪ್ಪನಿಗೆ ಗೌರವವನ್ನು ಸೂಚಿಸುತ್ತ ನನ್ನ ಕಡೆಗೆ ಕಣ್ಣು ಹೊರಳಿಸಿ ಅವರ ದೊಡ್ಡಪ್ಪನ ಕಥೆಯನ್ನು ಇನ್ನು ಮುಂದುವರಿಸದೆ ಸತ್ತ ಅವರ ಮುದ್ದಿನ ಮುತ್ತಜ್ಜಿಯ ಕಥೆಗಳನ್ನೇ ಇನ್ನಷ್ಟು ಹೇಳಬೇಕೆಂದು ಕೇಳಿಕೊಂಡರು. ಆಮೇಲೆ ನಾನು ಮತ್ತೆ ಕಥೆ ಹೇಳುತ್ತ ಹೇಗೆ ಇಡೀ ಏಳು ವರುಷಗಳ ಕಾಲ ಒಮ್ಮೊಮ್ಮೆ ನಿರಾಸೆಯಲ್ಲಿ ನೊಂದವನಾಗಿ ಉದ್ದಕ್ಕೂ ಪಟ್ಟುಹಿಡಿದು ಎದೆಗೆಡದೆ ಸ್ಫುರದ್ರೂಪಿಣಿಯಾದ ಆ್ಯಲಿಸ್ ಡಬ್ಲ್ಯು—ಎಸ್‌ಳಲ್ಲಿ ಅನುನಯ ತೋರಿದೆ ಎಂದೆ. ಮಕ್ಕಳಿಗೆ ಎಷ್ಟು ತಿಳಿಯುತ್ತದೆಯೊ ಅಷ್ಟು ತಿಳಿಯುವಂತೆ ನಾನು ಅವರಿಗೆ ತರುಣಿಯರ ಅನುನಯವನ್ನು ಗಳಿಸಿಕೊಳ್ಳುವವರಲ್ಲಿ ಎಂತೆಂತಹ ಲಜ್ಜೆ, ನಾಚಿಕೆ, ತೊಂದರೆ, ನಿರಾಕರಣೆಗಳು ಬರುತ್ತವೆ ಎನ್ನುವುದನ್ನೂ ವಿವರಿಸಿದೆ—ಹೀಗೆ ಹೇಳುತ್ತ, ಹೇಳುತ್ತ ಒಮ್ಮೆ ಇದ್ದಕ್ಕಿದ್ದ ಹಾಗೆಯೇ ನಾನು ಆ್ಯಲಿಸಳ ಕಡೆ

ನೋಡಿದಾಗ ಮೊದಲನೆಯ ಲ್ಯಾಲಿಸಳ ಆತ್ಮ, ಆವೇಡೀ ತದ್ರೂಪ ಒಡಮೂಡಿದೆ ಎನ್ನುವ ಹಾಗೆ ಈ ಲ್ಯಾಲಿಸಳ ಕಣ್ಣುಗಳಲ್ಲಿ ಅಷ್ಟೊಂದು ಸಹಜವಾಗಿ ಕಾಣತೊಡಗಿತು. ಆ ಇಬ್ಬರು ಲ್ಯಾಲಿಸರಲ್ಲಿ ನನ್ನೆದುರಿಗೆ ನಿಂತಿರುವವರು ಯಾರು ಈ ಹೊಳೆಯುತ್ತಿರುವ ಮುಂಗುರುಳು ಯಾರದು ಎನ್ನುವ ಸಂಶಯ ನನಗೇ ಬಂದು ಬಿಟ್ಟಿತು. ಹಾಗೆಯೇ ದೃಷ್ಟಿಸಿ ನೋಡುತ್ತ, ನೋಡುತ್ತ ಆ ಇಬ್ಬರು ಮಕ್ಕಳೂ ನನ್ನ ನೋಟಕ್ಕೆ ಬರಬರುತ್ತ ಮಸುಕು ಮಸಕಾಗಿ ಹಿಂದುಹಿಂದಕ್ಕೆ ಸರಿದು ಇನ್ನೂ ಸರಿಯುತ್ತ ಕೊನೆಗೆ ಕೇವಲ ವ್ಯಾಕುಲ ಗ್ರಸ್ತವಾದ ಮುಖ ಚಹರೆಗಳೆರಡು ಮಾತ್ರ ಸುದೂರ ದಿಗಂತದಲ್ಲಿ ಕಾಣಿಸುತ್ತಿದ್ದು ಅವು ಮಾತನಾಡದೆ ಮಾತಿನ ಪರಿಣಾಮ ನನ್ನ ಮೇಲೆ ಸಂಪೂರ್ಣವಾಗಿ ಒಡಮೂಡುವಂತಹ ವಿಚಿತ್ರ ರೀತಿಯಲ್ಲಿ ಈ ಅಭಿಪ್ರಾಯವನ್ನು ಮನಸ್ಸಿಗೆ ನಾಟುವಂತೆ ಮಾಡಿದುವು. "ನಾವು ಲ್ಯಾಲಿಸಿನವರೂ ಅಲ್ಲ, ನಿನ್ನವರೂ ಅಲ್ಲ, ನಾವು ಮಕ್ಕಳೂ ಅಲ್ಲ. ಲ್ಯಾಲಿಸಿನ ಮಕ್ಕಳು ತಮ್ಮ ತಂದೆಯನ್ನು ಬರ್ಟ್ರಮ್ ಎಂದು ಕರೆಯುವರು. ನಾವು ಕೇವಲ ಶೂನ್ಯರು, ಶೂನ್ಯವೂ ಅಲ್ಲದವರು. ನಾವು ಕೇವಲ ಕನಸುಗಳು. ನಾವು ಏನಾಗಬಹುದಾಗಿದ್ದೆವೊ ಎಂಬಂತಹವರು. ನಾವು ಒಂದು ಉಸಿರಾಗಿ ಆಕಾರ ತಾಳಿ ಹೆಸರು ಪಡೆದು ಬರಲು ಲಕ್ಷ ಲಕ್ಷವರ್ಷ ಜುಗುಪ್ಸಾವಹವಾದ ಲೀತೆಯ ದಡದಲ್ಲಿ ಕಾದಿರಬೇಕು"— ಒಡನೆಯೇ ಕಣ್ಣುಜ್ಜಿಕೊಂಡು ಮೈಮುರಿದು ನೋಡಿದರೆ ನಾನು ನಿದ್ದೆ ಹೋಗಿದ್ದ ಬ್ರಹ್ಮಚಾರಿಯ ಆರಾಮಪೀಠದಲ್ಲಿಯೇ ಶಾಂತನಾಗಿ ಕುಳಿತಿದ್ದೆ. ಬಳಿಯಲ್ಲಿಯೇ ಪರಮ ಆಪ್ತಳಾದ ಬ್ರಿಡ್ಜೆಟ್ ಕೂಡ ಹಾಗೆಯೇ ಕುಳಿತಿದ್ದರು—ಆದರೆ ಜಾನ್ ಎಲ್—(ಅಥವಾ ಜೇಮ್ಸ್ ಎಲಿಯ) ಮಾತ್ರ ಅಗಲಿ ಹೋದವನು ತಿರುಗಿ ಬರುವಂತಿರಲಿಲ್ಲ.

# ಕಾಹಿಲೆಯಿಂದ
# ಚೇತರಿಕೊಳ್ಳುತ್ತಿರುವ ರೋಗಿ

ಈಗ ಕೆಲವು ವಾರಗಳಿಂದಲೂ ಒಂದು ತೆರನಾದ ವಾತ ರೋಗದ ಇರಸುಮುರಸಿಗೆ ಸಿಕ್ಕು ಸೆರೆಯಾದವನಂತೆ ಮಲಗಿಕೊಂಡಿದ್ದ ನಾನು ಈಗತಾನೆ ಸ್ವಲ್ಪಸ್ವಲ್ಪವಾಗಿ ಅದರ ಸೆರೆಯಿಂದ ಬಿಡುಗಡೆ ಹೊಂದುತ್ತಿದೇನೆ. ಆದರೂ ಬೇರೆ ಯಾವ ಯೋಚನೆಗೂ ಮನಸ್ಸು ತೀರ ದುರ್ಬಲವಾಗಿರುವುದರಿಂದ ಓದುಗರು ಯಾರೂ ಈ ತಿಂಗಳು ನನ್ನಿಂದ ಯಾವ ಹಿತಕರವಾದ ವಿವೇಚನೆಯನ್ನೂ ನಿರೀಕ್ಷಿಸಬೇಡಿ. ನಿಮಗೆ ಬೇಕಿದ್ದರೆ ಸ್ವಪ್ನಜೀವಿಗಳಾದ ರೋಗಿಗಳ ವಿಚಾರವಾಗಿಯೇ ಏನಾದರೂ ಹೇಳಿಯೇನು.

ನಿಜವಾಗಿ ನೋಡಿದರೆ ರೋಗಿಗಳ ಸ್ಥಿತಿ ಉದ್ದಕ್ಕೂ ಒಂದು ಕನಸಿನ ಹಾಗೆಯೇ. ಹಗಲು ಹೊತ್ತು ನಡೆಯುವ ಯಾವ ವ್ಯಾಪಾರವೂ ಕಣ್ಣಿಗೆ ಬೀಳಬಾರದೆಂದೇ ಸುತ್ತಲೂ ಪರದೆಗಳನ್ನು ಕಟ್ಟಿಕೊಂಡು ನಾಡಿಯ ಮಂದಗತಿಯೊಂದರ ಹೊರತಾಗಿ ಉಳಿದೆಲ್ಲ ಬಾಹ್ಯಜಗತ್ತಿನ ವಿಷಯದಲ್ಲಿ ಚೇಷ್ಟಾಶೂನ್ಯನಾದವನಂತೆ ಹಾಸಿಗೆಯ ಮೇಲೆ ಮಲಗಿರುವುದು ಸ್ವಪ್ನಜೀವಿಯ ಸ್ಥಿತಿಯಲ್ಲದೆ ಮತ್ತೇನು!

ನನ್ನನ್ನು ಕೇಳಿದರೆ ರಾಜಯೋಗ್ಯವಾದ ಏಕಾಂತತೆಯೊಂದು ಇರುವುದಾದರೆ ಅದು ರೋಗಿಯ ಹಾಸಿಗೆಯೇ ಸರಿ ಎನ್ನುತ್ತೇನೆ. ಅದರ ಮೇಲೆ ರೋಗಿಯದು ಎಷ್ಟೊಂದು ಭರ್ಜರಿ ಪ್ರಭುತ್ವ! ಎಂತಹ ನಿರಂಕುಶ ವರ್ತನೆ! ಆತ ತನ್ನ ತಲೆದಿಂಬನ್ನು ತಾನೇ ಹೇಗೆ ರಾಜನ ಹಾಗೆ ಆಳುತ್ತಾನೆ! ಗುದ್ದುತ್ತ, ಹಿಸುಕುತ್ತ, ತಿರು

ಚುತ್ತ, ಸವರುತ್ತ, ತಗ್ಗಿಸುತ್ತ, ಎತ್ತರಿಸುತ್ತ, ಪಟಪಟನೆ ಹಿಡಿ ದೊಡೆಯುವ ತನ್ನ ಕಣ್ಣ ತಲೆಗೆ ಅಣಿಯಾಗಿ ಅಳವಡುವಂತೆ ಹೇಗೆ ಅದನ್ನು ಹಿಗ್ಗಾಮುಗ್ಗಾ ಎಳೆದಾಡುತ್ತಾನೆ!

ರಾಜನೀತಿಜ್ಞನಿಗಿಂತ ಜೇಗಜೇಗನೆ ರೋಗಿಯು ತನ್ನ ಪಕ್ಷಗಳನ್ನು ಬದಲಾಯಿಸುತ್ತಾನೆ. ಈಗ ಉದ್ದಕ್ಕೆ ಕಾಲುಚಾಚಿ ಮಲಗಿದವನು ಇನ್ನೊಂದು ಘಳಿಗೆಗೆ ಅರ್ಧಕ್ಕೆ ಕಾಲು ಮಡಸಿ ಕೊಳ್ಳುತ್ತಾನೆ. ಕ್ರಮೇಣ ಸೊಟ್ಟ ಸೊಟ್ಟನಾಗಿ ತಿರುಗುತ್ತ ಕಡೆಗೊಮ್ಮೆ ಹಾಸಿಗೆಗೆ ಅಡ್ಡಡ್ಡಲಾಗಿ ತಲೆ ಕಾಲುಗಳನ್ನು ಚಾಚಿ ಬಿಡುತ್ತಾನೆ. ಅವನ ಈ ನಿಮಿಷ ನಿಮಿಷದ ಸ್ಥಾನ ಬದಲಾವ ಣೆಗೆ ಯಾರಾದರೂ ಅವನನ್ನು ಆಕ್ಷೇಪಿಸುವುದುಂಟೇ! ನಾಲ್ಕು ತೆರೆಗಳ ನಡುವೆ ಆತ ಸರ್ವತಂತ್ರ ಸ್ವತಂತ್ರ.

ಕಾಹಿಲೆ ಬಂದರೆ ಅದು ಮನುಷ್ಯನ ಸ್ವಾರ್ಥಪರತೆಯನ್ನು ಹೇಗೆ ಹಿಗ್ಗಿಸಿಬಿಡುತ್ತದೆ! ಈಗ ಆತನಿಗೆ ತನ್ನದೇ ಯೋಗಕ್ಷೇಮ. ಮಹತ್ತಮವಾದ ಸ್ವಾರ್ಥಪರತೆಯ ಉಪದೇಶ ಅವನಿಗೆ ಈಗ ದಿನದಿನವೂ ನಡೆಯುತ್ತದೆ. ಈ ಉಪದೇಶವೇ ಅವನ ಪಾಲಿಗೆ ‘ ದೇವರು ಮೋಸಸ್ಸಿಗೆ ಕೊಟ್ಟ ಹತ್ತು ಆಜ್ಞೆಗಳು.’ ಕಾಯಿಲೆ ಹೇಗೆ ಗುಣವಾದೀತು ಎನ್ನುವುದರ ವಿನಾ ಆತ ಈಗ ಬೇರೆ ಯಾವುದನ್ನೂ ಯೋಚಿಸಬೇಕಾಗಿಲ್ಲ. ಮನೆಯು ಹೊರಗಾಗಲೀ ಒಳಗಾಗಲೀ ಏನು ನಡೆಯುತ್ತಿದೆ ಎನ್ನುವುದರ ಜಂಜಡಕ್ಕೆ ಆತ ಈಗ ಕಿವಿಗೊಡಬೇಕಾಗಿಲ್ಲ. ಈ ತೆರನಾದ ಜಂಜಡದಿಂದ ಅವ ನಿಗೆ ಮನಸ್ಸು ಕಲಕುವುದೂ ಇಲ್ಲ.

ಕೆಲವು ದಿನಗಳ ಹಿಂದೆ ತನ್ನ ಆಪ್ತಮಿತ್ರನ ಮೊಕದ್ದಮೆ ಯೊಂದರಲ್ಲಿ ಆತ ತುಂಬ ಆಸ್ಥೆ ವಹಿಸಿದ್ದನಲ್ಲವೆ! ತನ್ನ ಗೆಳೆ ಯನಿಗಾಗಿ ಊರಿನ ಐವತ್ತು ಕಡೆ ಓಡಾಡಿ ಈ ಸಾಕ್ಷಿಯೊಡನೆ

ಜಗ್ಗಾಡುತ್ತ ಆ ಸಲಹೆ ವಕೀಲನಿಗೆ ಹೆಚ್ಚಿನ ರುಸುಮುಕೊಡುತ್ತ ತುಂಬ ಶ್ರಮ ವಹಿಸಿ ಕೆಲಸ ಮಾಡುತ್ತಿದ್ದನಲ್ಲವೆ! ಆ ಮೊಕದ್ದಮೆ ನಿನ್ನೆಗಿತ್ತು. ಈಗಲಾದರೋ ಆತ ಹೀರಿಂಗಿನಲ್ಲಿ ನಡೆಯುವ ವಿಚಾರಣೆಯಾಗಿದ್ದರೂ ಹೇಗೊ ಹಾಗೆ ಆ ವಿಚಾರಣೆಯ ಬಗ್ಗೆ ತೀರ ತಟಸ್ಥನಾಗಿದಾನೆ. ಪ್ರಾಯಶಃ ತನಗೆ ಕೇಳಿಸಬಾರದೆಂದು ಪಿಸಿ ಪಿಸಿ ಮಾತನಾಡಿಕೊಳ್ಳುತ್ತಿರುವ ಮನೆಯವರ ಮಾತುಗಳಿಂದಲೆ ಆ ವಿಚಾರಣೆಯಲ್ಲಿ ತನ್ನ ಗೆಳೆಯನಿಗೆ ಅನ್ಯಾಯವಾಯಿತೆಂಬುದನ್ನು ತಿಳಿದುಕೊಳ್ಳುವಷ್ಟರ ಮಟ್ಟಿನ ವಿಷಯ ಸಂಗ್ರಹವನ್ನು ಆತ ಮಾಡಿಕೊಂಡಿದಾನೆ. ಆದರೇನು! 'ಸ್ನೇಹಿತ' ಎನ್ನುವ ಮಾತಾಗಲಿ 'ಅನ್ಯಾಯ' ಎನ್ನುವ ಮಾತಾಗಲಿ ಅವನ ಪಾಲಿಗೆ ಈಗ ಅರ್ಥವಿಲ್ಲದ ಒಣ ಸಂಕೇತ ಮಾತ್ರ! ಅವುಗಳಿಂದ ಅವನ ಮನಸ್ಸಿಗೆ ಯಾವ ಕಿರಿಕಿರಿಯೂ ಇಲ್ಲ. ಹೇಗೆ ಕಾಯಿಲೆ ವಾಸಿಯಾದೀತು ಎನ್ನುವುದರ ವಿನಾ ಬೇರೆ ಯಾವ ಯೋಚನೆಯನ್ನೂ ಅವನು ಈಗ ಮಾಡಕೂಡದು.

ತನ್ನೊಬ್ಬನ ಆ ಆರೈಕೆಯ ವಿಚಾರಮಗ್ನತೆಯಲ್ಲಿ ಸಮಸ್ತ ಬಾಹ್ಯಪ್ರಪಂಚವೂ ಹೇಗೆ ಕರಗಿ ಕಣ್ಮರೆಯಾಗುತ್ತಿದೆ!

ಈಗ ಆತ ತನ್ನ ಭದ್ರವಾದ ರೋಗವೆಂಬ ಯುದ್ಧಕವಚವನ್ನು ತೊಟ್ಟುಕೊಂಡಿದಾನೆ, ಬೇನೆಯೆಂಬ ಗಡುಸಾದ ಚರ್ಮದ ಹೊದಿಕೆಯನ್ನು ಸುತ್ತಿಕೊಂಡಿದಾನೆ, ಅತ್ಯಮೂಲ್ಯವಾದ ಮಾದಕ ದ್ರವ್ಯವನ್ನು ಭದ್ರವಾಗಿ ತನ್ನ ಉಪಯೋಗಕ್ಕೆ ಮಾತ್ರ ಖಾಸಲಾಗಿ ಬಚ್ಚಿಟ್ಟುಕೊಳ್ಳುವಂತೆ ಆತ ತನ್ನ ಅನುಕಂಪೆಯನ್ನು ತನ್ನೊಬ್ಬನ ಉಪಯೋಗಕ್ಕಾಗಿಯೇ ಬೀಗ ಮೊಹರು ಮಾಡಿ ಪ್ರತ್ಯೇಕವಾಗಿ ತೆಗೆದಿರಿಸಿಕೊಂಡಿದಾನೆ.

ಆತ, ತನಗೆ ತಾನೆ ಕನಿಕರಪಟ್ಟುಕೊಳ್ಳುತ್ತ, ತನಗೆ

ತಾನೇ ಮುಲುಕುತ್ತ, ತನಗೆ ತಾನೇ ನರಳುತ್ತ, ಮಲಗಿಕೊಂಡಿರುತ್ತಾನೆ. ಅವನಿಗೆ ತನ್ನ ಸಂಕಟವನ್ನು ನೆನೆದುಕೊಂಡರೆಯೇ ಕರುಳು ಕತ್ತರಿಸಿ ಬರುವಂತೆ ಆಗುತ್ತದೆ. ಆತ ತನ್ನ ದುರವಸ್ಥೆಗೆ ತಾನೇ ಅಳುವುದಕ್ಕೂ ಹೇಸುವುದಿಲ್ಲ.

ಈಗ ಆತ, ತನಗೆ ಗುಣವಾಗಬೇಕಾದರೆ ಏನು ಮಾಡಬೇಕೆಂಬುದರ ಬಗ್ಗೆ ಸಣ್ಣಪುಟ್ಟ ಹಂಚಿಕೆಗಳನ್ನು ಚಿಂತಿಸುತ್ತ, ಕೃತಕವಾದ ಉಪಶಮನ ಸಾಧನಗಳನ್ನು ಆಲೋಚಿಸುತ್ತ, ಒಳಗೊಳಗೇ ತರದೂತು ನಡಸಲು ಕೂಡ ಸಿದ್ಧನಾಗಿದ್ದಾನೆ.

ಆತ ತನ್ನ ಕಥೆಯನ್ನು ಒಂದು ರಾಮಾಯಣ ಮಾಡಿಬಿಡುತ್ತಾನೆ. ತನ್ನ ದೇಹದಲ್ಲಿ ಯಾವ ಯಾವ ಅಂಗಗಳು ನೋಯುವುವೋ ಯಾವ ಯಾವ ಅಂಗಗಳು ನುಲಿಯುವುವೋ ಅವುಗಳನ್ನೆಲ್ಲ ಕಾಲ್ಪನಿಕವಾಗಿ ತನ್ನ ದೇಹದಿಂದ ಬೇರ್ಪಡಿಸಿ ಪ್ರತ್ಯೇಕವಾದ ವ್ಯಕ್ತಿಗಳೆಂಬಂತೆ ಪರಿಗಣಿಸುತ್ತಾನೆ. ಕೆಲವು ವೇಳೆ ತನ್ನ ದೇಹದಿಂದ ಸಂಪೂರ್ಣವಾಗಿ ಬೇರೆಯಾದ ವಸ್ತುವೆಂಬಂತೆ ತನ್ನ ಸಿಡಿದೊಡೆಯುವ ಬಡ ತಲೆಯನ್ನು ಕುರಿತು ಚಿಂತಿಸುತ್ತಾನೆ. ನಿದ್ದೆಯ ಮಂಪರದಲ್ಲಿಯೂ ನಿದ್ದೆ ತಿಳಿದ ಎಚ್ಚರದಲ್ಲಿಯೂ ಒಂದೇ ಸಮನೆ ರಾತ್ರಿಯೆಲ್ಲ ತಲೆಯೊಳಗೆ ಒಂದು ಮರದ ತುಂಡಿನಂತೆಯೋ ಘನೀಭೂತವಾದ ವೇದನೆಯಂತೆಯೋ ಸಿಡಿಯುತ್ತಿದ್ದು, ತಲೆಯ ಚಿಪ್ಪು ಕಳಚಿ ಹೊರಗೆ ಎಳೆದಲ್ಲದೆ ಆ ಸಿಡಿತ ಹೋಗಲಾರದೆಂಬಂತಹ ರೀತಿಯಲ್ಲಿ ಸಿಡಿಯುತ್ತಿದ್ದ ಆ ತಲೆಶೂಲೆಯನ್ನು ಕುರಿತು ವ್ಯಗ್ರಮನಸ್ಕನಾಗುತ್ತಾನೆ. ಒಮ್ಮೊಮ್ಮೆ ಉಷ್ಣವಾಗಿ ತಣ್ಣಗೆ ಅಂಟಂಟಾಗಿರುವ ತನ್ನ ನಡುಗುವ ಕೈಬೆರಳುಗಳನ್ನು ನೋಡಿಕೊಂಡು ಮರುಗುತ್ತಾನೆ. ತನಗೆ ತಾನೆ ಕನಿಕರಪಟ್ಟುಕೊಳ್ಳುತ್ತಾನೆ. ಹೀಗಾಗಿ ಅವನ ಹಾಸಿಗೆಯೇ

ಕನಿಕರ ದಯಾರ್ದ್ರ ಹೃದಯಗಳ ಒಂದು ಶಿಕ್ಷಣ ಸಂಸ್ಥೆಯಾಗಿ ತೋರುತ್ತದೆ.

ತಾನೇ ತನ್ನ ಒಡನೋಯಿ, ತಾನೇ ತನ್ನ ಒಡನಾಡಿ. ಅಲ್ಲದೆ ಉಳಿದವರು ಯಾರೂ ತನ್ನ ಹಾಗೆ ಆ ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸಲಾರರೆಂದು ಆತ ಸಹಜವಾಗಿ ನಂಬುತ್ತಾನೆ. ತನ್ನ ದುಃಸ್ಥಿತಿಯನ್ನು ನೋಡಿ ತಿಳಿಯಲು ಹೆಚ್ಚು ಮಂದಿ ಪ್ರೇಕ್ಷಕರು ಬರುವುದು ಬೇಡವೆನಿಸುತ್ತದೆ. ತನ್ನ ಪಥ್ಯಪಾನೀಯಗಳನ್ನು ಹೇಳಿ ಹೋಗಲು ಕಾಲಕಾಲಕ್ಕೆ ತಪ್ಪದೆ ಬರುವ ಮುದಿ ದಾದಿಯ ಮುಖವೊಂದೇ ಅವನಿಗೆ ಸಂತೋಷವನ್ನು ಉಂಟುಮಾಡತಕ್ಕದ್ದು. ಆ ಮುದಿ ಮುಖದ ಮುಂದೆ ತನ್ನ ಮಂಚದ ಕಾಲುಗಳ ಮುಂದೆ ಹೇಗೋ ಹಾಗೆ ನಿಸ್ಸಂಕೋಚವಾಗಿ ಜ್ವರದ ಹಲವರಿಕೆಗಳನ್ನೆಲ್ಲ ಹೊರಸೂಸಬಹುದೆಂದೇ ಆ ಮುದಿ ಮುಖವನ್ನು ಕಂಡರೆ ಆತನಿಗೆ ತುಂಬ ಸಂತೋಷ. ಇಷ್ಟಾದರೂ ಆ ಮುಖದ ಮೇಲೆ ಯಾವ ಪರಿಣಾಮವೂ ಆಗುವುದು ಕಾಣಬರುವುದಿಲ್ಲವೆಂದೇ ಆ ಮುಖ ಅವನಿಗೆ ತುಂಬ ಅಪೇಕ್ಷಣೀಯ.

ಪ್ರಪಂಚದ ವ್ಯವಹಾರಗಳಿಗೆ ಆತ ಮೃತಪ್ರಾಯನಾಗಿದಾನೆ. ಮರ್ತ್ಯರ ಕರೆಮೊರೆಗಳಿಗೆ ಜಡನಾಗಿದಾನೆ. ಎಲ್ಲಿಯೋ ಡಾಕ್ಟರು ಬಂದು ಹೋದಾಗ ಮಾತ್ರ ಬಾಹ್ಯಪ್ರಪಂಚದ ಮಸುಕು ಮಸುಕಾದ ಕಲ್ಪನೆ ಬಂದಂತೆ ಆಗುತ್ತದೆ, ಅಷ್ಟೆ. ಆ ಡಾಕ್ಟರ ಹಣೆಯ ಮೇಲೆ ಕೂಡ ಅಸಂಖ್ಯಾತರಾದ ಇತರ ರೋಗಿಗಳ ಬಗ್ಗೆ ಉಲ್ಲೇಖವಿರುವಂತೆ ಅವನಿಗೆ ಎನಿಸುವುದಿಲ್ಲ. ಏನಿದ್ದರೂ ತಾನೊಬ್ಬನೇ ರೋಗಿ ಎನ್ನುವುದೇ ಅವನ ದೃಢವಾದ ನಂಬಿಕೆ. ಆ ಡಾಕ್ಟರು ತನಗೆ ಕೊಟ್ಟ ಹಣವನ್ನು ಎಲ್ಲಿ ಕಟ್ಟ

ವಾದೀತೋ ಎಂದು ಬಹು ಎಚ್ಚರಿಕೆಯಿಂದ ಕಿಸೆಯೊಳಕ್ಕೆ ಸೇರಿಸಿ ಅವಸರ ಅವಸರವಾಗಿ ಇನ್ನಾವ ರೋಗಿಯ ರುಗ್ಣಶಯ್ಯೆಗೆಂದು ಧಾವಿಸಲಿರುವನೋ ಎಂಬ ವಿಚಾರ ಈ ರೋಗಿಗೆ ಅಪ್ರಯುಕ್ತ. ನಾಳೆ ಇದೇ ಹೊತ್ತಿಗೆ ಇದೇ ವ್ಯಕ್ತಿ ಇದೇ ರೀತಿ ಬಂದು ಹೋಗುವುದುಂಟೆಂಬುದನ್ನು ಮಾತ್ರ ಆತ ಯೋಚಿಸುತ್ತಿರುತ್ತಾನೆ.

ಗೃಹಕೃತ್ಯದ ಯಾವ ಸುದ್ದಿಯೂ ಈಗ ಅವನ ಕಿವಿಗೆ ಬೀಳುವುದಿಲ್ಲ. ಮನೆಯಲ್ಲಿ ಸಂಸಾರಚಕ್ರ ಎಂದಿನಂತೆ ಉರುಳುವುದನ್ನು ಸೂಚಿಸುವಂತಹ ಕೆಲವೊಂದು ಅಸ್ಪಷ್ಟವಾದ ಪಿಸಿಪಿಸಿ ಮಾತುಗಳು ಆಗಾಗ ಕೇಳಿಸುವುದುಂಟು. ಆದರಿಂದ ಆತನಿಗೆ ಯಾವ ವಿಷಯವೂ ಸ್ಪಷ್ಟವಾಗಿ ತಿಳಿಯದಿದ್ದರೂ ಮನಸ್ಸಿಗೆ ಏನೋ ಒಂದು ರೀತಿಯ ಸಮಾಧಾನವಾಗುತ್ತದೆ. ಅವನು ಯಾವುದನ್ನೂ ತಿಳಿಯಕೂಡದು, ಯಾವುದರ ವಿಷಯವಾಗಿಯೂ ಚಿಂತಿಸಬಾರದು. ವೆಲ್‌ವೆಟ್ಟಿನ ಮೇಲೆ ಹೇಗೋ ಹಾಗೆ ಸೇವಕರು ದೂರದ ಮಹಡಿಯ ಮೆಟ್ಟಿಲುಗಳನ್ನು ಮೆಲ್ಲಗೆ ಹತ್ತಿ ಇಳಿಯುವುದು ಅವನ ಕಿವಿಗೆ ಕೇಳಿಸುತ್ತದೆ. ಆತನ ಸೇವಕರ ಓಡಾಟದ ದೌತ್ಯದ ಬಗ್ಗೆ ಮಬ್ಬು ಮಬ್ಬಾಗಿ ಊಹಿಸುವುದರ ವಿನಾ ಯಾವ ಹೆಚ್ಚಿನ ಗೊಂದಲಕ್ಕೂ ಹೋಗಲಿಚ್ಛಿಸುವುದಿಲ್ಲ. ಊಹೆಯ ಮನೋಭಾವವನ್ನು ಮಾತ್ರ ಸಹಿಸಬಲ್ಲನೇ ಹೊರತು ಸ್ಪಷ್ಟವಾದ ವಿಷಯಗಳ ಕಲ್ಪನೆ ಅವನಿಗೆ ತೀರ ಹೊರೆಯಾಗುತ್ತದೆ. ಕೈಚೀಲ ಹಾಕಿಕೊಂಡವನು ಬಾಗಿಲು ತಟ್ಟುವ ಮಂದವಾದ ಶಬ್ದಕ್ಕೆ ಆತ ಕಣ್ಣು ಮುಚ್ಚುತ್ತಾನೆ. ಎಲ್ಲರೂ ತನ್ನ ಯೋಗಕ್ಷೇಮವನ್ನು ವಿಚಾರಿಸುತ್ತಿರುವರೆಂದು ಜನ ಅವನನ್ನು ಉಬ್ಬಿಸುತ್ತಾರೆ. ಆದರೆ ಅವನಿಗೆ ಅಂತಹವರ ಹೆಸರು ತಿಳಿಯುವುದು ಕೂಡ ಬೇಕಿಲ್ಲ. ನೀರವವಾದ ಬಣಗುಟ್ಟುವ ಮನೆಯ

ಆವರಣದಲ್ಲಿ ಆತ ಸಾರ್ವಭೌಮನಂತೆ ಹಾಸಿಗೆಯಲ್ಲಿ ಪವಡಿಸಿರುತ್ತಾನೆ.

ಕಾಹಿಲೆ ಮಲಗುವುದು ಸಾರ್ವಭೌಮ ಸದೃಶವಾದ ವಿಶೇಷಾಧಿಕಾರಗಳನ್ನು ಉಪಭೋಗಿಸುವುದಕ್ಕಾಗಿಯೇ. ಮನೆಯವರೂ ಸೇವಕರೂ ಸದ್ದು ಮಾಡದೆ ಓಡಾಡುವುದೇನು! ಗದ್ದಲವಿಲ್ಲದೆ ಓಲೈಸುವುದೇನು! ಕಣ್ಣರಿವಿನಿಂದಲೇ ಸೇವೆಗೈಯಲು ಹವಣಿಸುವುದೇನು! ಆಮೇಲೆ ಕಾಯಿಲೆ ಹಿಮ್ಮೆಟ್ಟಿದಂತೆ ಇವರುಗಳು ಅಜಾಗರೂಕರಾಗಿ ನಡೆದುಕೊಳ್ಳುವುದೇನು! ನಿಸ್ಸಂಕೋಚವಾಗಿ ಬೇಕುಬೇಕಾದ ಹಾಗೆ ಒಳಕ್ಕೂ ಹೊರಕ್ಕೂ ಓಡಾಡುವುದೇನು! ಧಡಾರನೆ ಬಾಗಿಲು ತೆಗೆಯುವುದೇನು! ತೆಗೆದ ಬಾಗಿಲು ಹಾಕಿಕೊಳ್ಳದೆ ಹೋಗುವುದೇನು! ಇದನ್ನೆಲ್ಲ ನೋಡಿದರೆ ರೋಗಿಯ ಹಾಸಿಗೆಯಿಂದ ನಿರೋಗಿಯ ಆರಾಮಕುರ್ಚಿಗೆ ಅದೆಂತಹ ಅಧಃಪತನ! ಅದೆಂತಹ ಪದಚ್ಯುತಿಗೆ ಸದೃಶವಾದ ಸ್ಥಾನಪಲ್ಲಟ! ಎನ್ನುವುದು ವ್ಯಕ್ತವಾಗುವುದಿಲ್ಲವೇ ರೋಗ ಗುಣಮುಖವಾಗುತ್ತ ಬಂದ ಹಾಗೆಲ್ಲ ಮಾನವನು ಹೇಗೆ ತನ್ನ ಮಾಮೂಲಿನ ಪೂರ್ವಸ್ಥಿತಿಗೆ ಇಳಿದುಬಿಡುತ್ತಾನೆ! ಮೊನ್ನೆ ಮೊನ್ನೆ ತನ್ನ ಮನೆಯಲ್ಲಿಯೇ ಮನೆಯವರಿಂದ ಪಡೆದುಕೊಂಡಿದ್ದ ವಿಶೇಷ ರೀತಿಯ ಸ್ಥಾನಮಾನಗಳು ಈಗ ಏನಾದವು ಎಲ್ಲಿ ಹೋದವು!

ಇದುವರೆಗೆ ತನ್ನ ಅರಸೊತ್ತಿಗೆಯ ·ಕಾರ್ಯಕ್ಷೇತ್ರವಾಗಿ ಮಲಗಿದಲ್ಲಿಂದಲೇ ನಿರಂಕುಶಪ್ರಭುತ್ವದ ಖಯಾಲಿಗಳನ್ನು ನಡೆಸಿಕೊಂಡ ದಿವಾಣಖಾನೆಯಾಗಿದ್ದ ಕಾಯಿಲೆ ಕೋಣೆ ಈಗ ಇದೆಂತಹ ಸರ್ವಸಾಮಾನ್ಯವಾದ ಮಲಗುವ ಮನೆಯಾಗಿ ಬಿಟ್ಟಿದೆ! ಎಷ್ಟು ನಾಜೂಕಾಗಿದ್ದ ಹಾಸಿಗೆ ಎಷ್ಟು ಅಮುಖ್ಯವೂ ಅವ್ಯವಸ್ಥಿತವೂ ಆಗಿದೆ! ಇದನ್ನು ಈಗ ದಿನವೂ ಹಾಸುವು

ದಾಗಿದೆ. ಸ್ವಲ್ಪ ದಿನಗಳ ಹಿಂದೆ ಕಡಲಿನ ಮೇಲ್ಮೈಯಂತೆ ಸುಕ್ಕುಸುಕ್ಕಾಗಿ ತೆರೆತೆರೆಯಾಗಿ ಕಾಣುತ್ತಿದ್ದ ಆ ಹಾಸಿಗೆಗೂ ಇದಕ್ಕೂ ಎಷ್ಟೊಂದು ವ್ಯತ್ಯಾಸ! ಆಗ ಹಾಸಿಗೆ ಹಾಸುವುದು ಎನ್ನುವುದು, ಹಗಲೆಲ್ಲ ಮಾಡಬಹುದಾದ ಉದ್ಯೋಗವಾಗಿರುತ್ತದೆ! ಎಲ್ಲಿಯೋ ಮೂರು ದಿನಕ್ಕೊ ನಾಲ್ಕು ದಿನಕ್ಕೊ ಒಮ್ಮೆ ಪೂರ್ವಭಾವಿಯಾಗಿ ವಿಚಾರಮಾಡಿ ಒಂದು ಕ್ರಾಂತಿಯಂತೆ ಈ ಉದ್ಯೋಗವನ್ನು ನಡೆಸಬೇಕಾಗಿತ್ತು. ಆಗ್ಗೆ ರೋಗಿಯನ್ನು ಸಂಪೂರ್ಣವಾಗಿ ಎತ್ತಿ ಬೇರೆ ಕಡೆ ಮಲಗಿಸಬೇಕಾಗುತ್ತಿತ್ತು. ಇದರಿಂದ ಅವನಿಗೆ ಎಷ್ಟೊಂದು ನೋವು, ಎಷ್ಟೊಂದು ಯಾತನೆ! ಅಲ್ಲದೆ ತನ್ನ ಜರ್ಝರಿತವಾದ ಅಸ್ತಿಪಂಜರ ಬೇಡಲೇ ಬೇಡವೆಂದು ಹೇಳುತ್ತಿದ್ದರೂ ಈ ಅನಾಹೂತ ನಿರ್ಮಲೀಕರಣಕ್ಕೂ ಸ್ವಚ್ಛತೆಗೂ ಶುಚಿಶುಭ್ರತೆಗೂ ಆತ ಮನಸ್ಸಿಲ್ಲದ ಮನಸ್ಸಿನಲ್ಲಿ ತಲೆಬಾಗಬೇಕಾಗುತ್ತಿತ್ತು. ಆಮೇಲೆ ಮತ್ತೆ ಅದೇ ಶುಚಿಗೈದ ಸಜ್ಜಾದ ಹಾಸಿಗೆಯಲ್ಲಿ ಆತನನ್ನು ಮಲಗಿಸುತ್ತಿದ್ದರು. ತಿರುಗಿ ಅದು ಸುಕ್ಕುಸುಕ್ಕಾಗುವುದಕ್ಕೆ ಮೂರು ನಾಲ್ಕು ದಿನಗಳ ಕಾಲಾವಕಾಶವಿರುತ್ತಿತ್ತು ಅಷ್ಟೆ. ಆ ಅವಧಿಯಲ್ಲಿ ಹಾಸಿಗೆಯಲ್ಲಿ ಕಾಣಬರುತ್ತಿದ್ದ ಒಂದೊಂದು ಸುಕ್ಕೂ ರೋಗಿ ಯಾವುದೋ ಸುಖಕ್ಕಾಗಿ ಮಗ್ಗುಲು ಮುರಚಿಕೊಂಡದ್ದನ್ನೂ ಯಾವುದೋ ಬೇನೆಗಾಗಿ ಕರುಳು ಸುಲಿಚಿಕೊಂಡಿದ್ದನ್ನೂ ಮೈಮುರಿದುಕೊಂಡದ್ದನ್ನೂ ತಿಳಿಸುವ ದಾಖಲೆಯಾಗಿ ನಿಂತಿರುತ್ತದೆ. ಅಷ್ಟೇ ಅಲ್ಲ, ಅವನ ಸಂಕಟದ ನಿಜಸ್ಥಿತಿ ಅವನ ಮುಖದ ಮೇಲಿನ ಸುಕ್ಕುಗಳಿಂದ ಗೊತ್ತಾಗುವುದಕ್ಕಿಂತ ಅವನ ಮುದುರಿಕೊಂಡ ಹಾಸಿಗೆಯಿಂದ ಗೊತ್ತಾಗುವುದೇ ಹೆಚ್ಚು.

ಅದೆಂತಹ ಗೂಢತರವಾದ ನಿಟ್ಟುಸಿರಿನ [illegible]!

ಅದೆಂತಹ ಕರಾಳವಾದ ನರಳಾಟದ ಭೀಕರತೆ! ಅದಾವ ಅಸಹ್ಯಯಾತನೆಯ ರಹಸ್ಯ ರಸಾತಲದ ಕುಹರದಿಂದ ಅವು ಹೊರಹೊಮ್ಮುತ್ತಿದ್ದಿರಬಹುದು!

ಬಹುಶಃ ಇನ್ನೂ ಯಥಾ ಸಾವಕಾಶವಾಗಿ ಬಂದು ಬಂದು ನೋಡಿಕೊಂಡು ಹೋಗುತ್ತಿರುವ ವೈದ್ಯಮಹಾಶಯನ ಸಂದರ್ಶನಗಳಲ್ಲಿ ಮಾತ್ರ ರೋಗಿಯ ವೈಭವೋಪೇತವಾದ ಸ್ವಪ್ನ ಸಾಮ್ರಾಜ್ಯದ ಕೆಲವು ಅವಶೇಷಗಳು ಉಳಿದುಕೊಂಡಿವೆ ಎನ್ನಬಹುದು. ಆದರೆ ಈ ವೈದ್ಯನೂ ಕೂಡ ಉಳಿದೆಲ್ಲದರ ಹಾಗೆ ಹೇಗೆ ಬದಲಾಯಿಸಿಬಿಟ್ಟಿದ್ದಾನೆ. ಈತ ಹಿಂದೆ ಬರುತ್ತಿದ್ದವನೇ ಇರಬಹುದೆ? ಈ ಹರಟೆ ಹೊಡೆಯುವ, ಕಥೆ ಹೇಳುವ, ವೈದ್ಯವೊಂದರ ವಿನಾ ಉಳಿದುದೆಲ್ಲವನ್ನೂ ಹೇಳುವ ಈತ ಆತನೇ ಇರಬಹುದೆ! ಮೊನ್ನೆ ಮೊನ್ನೆ ರೋಗಿಗೂ ಅವನ ಪರಮಶತ್ರುವಿಗೂ ನಡುವೆ, ಮಧ್ಯಸ್ಥಗಾರರಾಗಿ ಮುಂದೆ ಬಂದ ಪ್ರಕೃತಿಮಾತೆಯ ಕಡೆಯ ಮಹಾ ನಿಯೋಗಿಯಾಗಿ ಬಂದಾತ ಈತನೆ ಇರಬಹುದೆ! ಥತ್! ಇದು ಯಾವುದೋ ಒಂದು ಮುದಿಹಪ್ರ!

ಈ ವೈದ್ಯನೊಂದಿಗೆ ನನ್ನ ಕಾಯಿಲೆಯನ್ನು ವೈಭವಪೂರ್ಣವಾದ ರಾಜಭೋಗವೆಂಬಂತೆ ನಡಸಿಕೊಟ್ಟ ಸಮಸ್ತರಿಗೂ ಸಮಸ್ತಕ್ಕೂ ಇದೋ ನನ್ನ ಕಡೆಯ ನಮಸ್ಕಾರಗಳು! ಆ ಮನೆಯ ಬಣಬಣಗುಟ್ಟುವ ನಿಶ್ಚಲತೆಗೂ ಮನೆಯ ಒಳಗೆಲ್ಲ ಮರುಭೂಮಿಗೆ ಸದೃಶವಾದ ನೀರವತೆಗೂ, ಗದ್ದಲವಿಲ್ಲದ ಸೇವೆಗೂ, ಕಣ್ಣಸನ್ನೆಯ ಯೋಗಕ್ಷೇಮ ವಿಚಾರಣೆಗೂ ತನ್ನಲ್ಲಿಯೇ ನಷ್ಟ ಸ್ಮೃತಿಯ ನೋಟಕ್ಕೂ, ಬಾಹ್ಯ ಪ್ರಪಂಚದ ಜಂಜಡವಿಹೀನವಾದ ನಿರ್ಲಿಪ್ತತೆಗೂ ತನ್ನ ರಂಗಮಂದಿರದಲ್ಲಿ ತಾನೇ ಒಂದು ಪ್ರಪಂಚವಾಗಿದ್ದಾಗಿನ ಸ್ವಾರ್ಥತೆಗೂ ಇದೋ ನನ್ನ ಕಡೆಯ ವಂದನೆಗಳು!

ಈಗ ಕಾಯಿಲೆಯು ಕಡಲ ಉಬ್ಬರವಿಳಿದ ಮೇಲೆ ಹಾಸಿ ನಿಂತ ಈ ಚೇತರಿಕೆಯು ಕೊಳಚೆಯು ಕೆಸರಿನಲ್ಲಿ ಸಂಪೂರ್ಣವಾದ ಆರೋಗ್ಯದ ಸ್ಥಿರನೆಲವಿನ್ನೂ ದೂರವಿರುವಾಗ ನಾನು ಮಲಗಿದ್ದಂತೆಯೇ ಪ್ರಿಯ ಸಂಪಾದಕ ಮಹಾಶಯ, ನನ್ನಿಂದ ಲೇಖನವನ್ನು ಅಪೇಕ್ಷಿಸಿ ಬರೆದ ನಿಮ್ಮ ಕಾಗದ ನನ್ನ ಕೈ ಸೇರಿತು. ಆ ಕಾಲದಲ್ಲಿ ಬಂದಂತೆ ತೋರಿದರೂ ಈ ಕರೆ ಇದುವರೆಗೂ ನನ್ನ ಕಣ್ಮರೆಯಾಗಿದ್ದ ಈ ಜೀವನದ ಜುಜುಬಿ ವ್ಯಾಪಾರಗಳಿಗೆ ಪುನಃ ನನ್ನನ್ನು ಸೇರಿಸಿಬಿಡುವಂತೆ ತೋರಿತು. ಶರೀರ ಗೌಣವಾದರೂ ಕೆಲಸಕಾರ್ಯಗಳ ಚಟುಪಟಿಕೆಗಳಿಗೆ ಇದು ಎಂತಹ ನಯವಾದ ಪ್ರೇರಣೆ! ಈ ಪ್ರಪಂಚದ ಆಗು ಹೋಗುಗಳಿಗೂ ನೀತಿ ನಿಯಮಗಳಿಗೂ ಪ್ರಜ್ಞಾಶೂನ್ಯನಾಗಿ ಮಲಗಿಕೊಂಡಿದ್ದ ನನ್ನ ಸ್ವಾರ್ಥ ಪರಾಯಣತೆಯ ಅಸಂಬದ್ಧವಾದ ಸ್ವಪ್ನದಿಂದ ಎಂತಹ ಹಿತಾವಹವಾದ ನವಜಾಗೃತಿಗೆ ಸತ್ಪ್ರೇರಣೆ! ಅಜೀರ್ಣರೋಗದ ಜಠರ ವಾಯುವು ಶಮನವಾಗುತ್ತಿದೆ! ನನ್ನ ಕಲ್ಪನೆಯಲ್ಲಿ ವಿಹರಿಸುತ್ತಿದ್ದ ಹಲವಾರು ಎಕರೆಗಳ ಭೂಮಿ ಈಗ ಗೇಣಗಲದ ನೆಲವಾಗುತ್ತಿದೆ. ಇನ್ನೊಬ್ಬನ ರೋಗದ ಪಿಡಂಭೂತದ ಚಿರಂತನ ಧ್ಯಾನದಲ್ಲಿಯೇ ಲೀನನಾದ ರೋಗಿ ಆ ಚಿಂತೆಯಲ್ಲಿಯೇ ಭೂತಾಕಾರನಾಗಿ ಬೃಹದ್ವಿಹಾರಿಯಾಗಿರುತ್ತಾನೆ. ಈಗ ಸ್ವಲ್ಪ ದಿನಗಳ ಹಿಂದೆ ಆ ರೀತಿಯಲ್ಲಿ ಆತ್ಮಹಿತರತನಾದ ಮಹಾ ಸ್ವಾರ್ಥತೆಯ ದೈತ್ಯನಂತಿದ್ದ ನಾನು ಈಗ ಮತ್ತೊಮ್ಮೆ ನನ್ನ ಸಹಜವಾದ ರೀತಿನೀತಿಗಳಲ್ಲಿ ತೆಳ್ಳನೆಯ ಬಡಕಲು ಒಡಕಲಾದ ನಿಮ್ಮ ಅಪ್ರಮುಖನಾದ ಪ್ರಬಂಧಕಾರನಾಗಿ ಪ್ರಪಂಚಕ್ಕೆ ಬರುತ್ತಿದ್ದೇನೆ.

---

# ಟಿಪ್ಪಣಿ

ಪುಟ ೧೧ ಶ್ರೀಕಾಂತ ಸುಧಾಮರು—ಮೂಲದಲ್ಲಿ ಸ್ಟೀಲ್ Laertes ಮತ್ತು Irus ಎಂಬ ಹೆಸರುಗಳನ್ನು ಉಪಯೋಗಿಸಿದಾನೆ. ಈ ಎರಡು ಹೆಸರುಗಳೂ ಗ್ರೀಕ್ ಪುರಾಣದಿಂದ ಆರಿಸಿಕೊಂಡವು. Laertes ಶ್ರೀಮಂತಿಕೆಯ ಪ್ರತಿನಿಧಿಯಾಗಿಯೂ, Irus ಬಡತನದ ಪ್ರತಿನಿಧಿಯಾಗಿಯೂ ಅಲ್ಲಿ ಬಂದಿದಾರೆ. ಅನುವಾದದಲ್ಲಿ ಶ್ರೀಕಾಂತ ಸುಧಾಮರೆಂಬ ಹೆಸರು ಸರಿಹೋಗಬಹುದೆಂದುಕೊಂಡಿದೆ.

ಪುಟ ೧೨ ಏಬ್ರಹಾಂ ಕೌಲಿ—ಕವಿ ಮತು ಪ್ರಬಂಧಕಾರ. ಈತನ ಕಾಲ ೧೬೧೮—೧೬೬೭.

ಪುಟ ೧೨ ಪ್ರಕಟಣಕಾರ—ಜಿಷಪ್ ಸ್ಪ್ರ್ಯಾಟ್ ಎಂಬಾತ, ಕಾಲ ೧೬೩೫—೧೭೧೩. ಕೌಲಿಯ ಕೃತಿಗಳನ್ನೂ ಜೀವನ ವೃತ್ತಾಂತವನ್ನೂ ಈತ ಪ್ರಕಟಪಡಿಸಿದ.

ಪುಟ ೨೫ ಸರ್ ರೋಜರ್ ಡಿ ಕವರ್‌ಲಿ—ಸ್ಪೆಕ್ಟೇಟರ್ ಪತ್ರಿಕೆಯಲ್ಲಿ ವರ್ಣಿತವಾಗಿರುವ ಸಭ್ಯನಾದ ಶ್ರೀಮಂತ ವ್ಯಕ್ತಿ. ಸ್ಪೆಕ್ಟೇಟರ್ ಕ್ಲಬ್ಬಿನ ಪ್ರಮುಖ ಸನ್ಮಾನ್ಯ ಸದಸ್ಯ.

ಪುಟ ೨೫ ಪಾರ್ಲಿಮೆಂಟ್ ಪಕ್ಷ, ಪ್ರಭು ಪಕ್ಷ—ಕ್ರಿ. ಶ. ೧೭ನೆಯ ಶತಮಾನದಲ್ಲಿ, ಇಂಗ್ಲೆಂಡಿನಲ್ಲಿ ಒಂದನೆಯ ಚಾರಲ್ಸ್ ಆಳುತ್ತಿದ್ದಾಗ ಒಂದು ಅಂತರ್ಯುದ್ಧ ನಡೆಯಿತು. ಆಗ Round heads ಪಾರ್ಲಿಮೆಂಟ್ ಪಕ್ಷವನ್ನೂ Cavaliers ಪ್ರಭು ಪಕ್ಷವನ್ನೂ ಸೇರಿ ಹೊಡೆದಾಡಿದರು.

ಪುಟ ೨೭ ಪ್ಲೂಟಾರ್ಕ್—ಕ್ರಿ. ಶ. ೧ನೆಯ ಶತಮಾನದ ಗ್ರೀಸ್ ದೇಶದ ಜೀವನಚರಿತ್ರಕಾರ. ಇಲ್ಲಿ ಹೇಳಿರುವ ಮಾತು ಈತನ 'On the Utility of enimies' ಎಂಬ ಬರಹದಲ್ಲಿ ಬಂದಿದೆ.

ಪುಟ ೩೭ ಮಹಾಮಹಿಮನ ದಿವ್ಯಸಂದೇಶ—‘ನಿನ್ನ ಹಗೆಗಳನ್ನು ಪ್ರೀತಿಸು’ ಎಂಬ ಬೈಬಲ್ಲಿನಲ್ಲಿ ಬರುವ ಪ್ರಭು ಏಸುವಿನ ಸಂದೇಶ.

ಪುಟ ೩೭ ಆಂಡ್ರ್ಯೂ ಫ್ರೀ ಪೋರ್ಟ್—ಸ್ಪೆಕ್ಟೇಟರ್ ಕ್ಲಬ್ಬಿನ ಇನ್ನೊಬ್ಬ ಮುಖ್ಯ ಸದಸ್ಯ, ಧನಿಕ, ವರ್ತಕಶ್ರೇಷ್ಠ.

ಪುಟ ೩೭ ವಿಲ್—ಒಳ್ಳೆಯ ಸ್ನೇಹಪರನಾದ ವ್ಯಕ್ತಿ, ರೋಜರನ ಗೆಳೆಯ, ಸ್ಪೆಕ್ಟೇಟರ್ ಕ್ಲಬ್ಬಿನ ಸದಸ್ಯರಲ್ಲಿ ಒಬ್ಬ.

ಪುಟ ೫೦ ಆಧುನಿಕಶಾಸ್ತ್ರಜ್ಞ—ಬರ್ನಾರ್ಡ್.

ಪುಟ ೫೦ ಬೇರ್—ಕಾಲ, ೧೬೪೬—೧೭೦೬, ತತ್ತ್ವಜ್ಞಾನಿ, ಮೊದಲು ಪ್ರಾಟೆಸ್ಟೆಂಟ್ ಆಗಿ ಆಮೇಲೆ ಕ್ಯಾಥೊಲಿಕ್ ಆಗಿ ಕೊನೆಗೆ ಸಂದೇಹವಾದಿಯಾದ, ನಾಸ್ತಿಕನಾದ. Dictionary of history and criticism ಎಂಬ ಗ್ರಂಥದ ಕರ್ತೃ.

ಪುಟ ೫೦ ಸಿಸಿರೊ—ಕ್ರಿ. ಶ. ೧ನೆಯ ಶತಮಾನದಲ್ಲಿದ್ದವನು. ಪ್ರಖ್ಯಾತನಾದ ರೋಮನ್ನಿನ ರಾಜ್ಯನೀತಿಜ್ಞನೂ ವಾಗ್ಮಿಯೂ ಆಗಿದ್ದನು. ಜೂಲಿಯಸ್ ಸೀಸರನ ಹಿರಿಯ. ಸಮಕಾಲೀನ.

ಪುಟ ೫೧ ಡ್ಯಾಂಪಿಯರ್—ದೊಡ್ಡ ಡಚ್ ನಾವಿಕ, ೧೬೫೨—Voyage round the world ಎಂಬ ಗ್ರಂಥದ ಕರ್ತೃ

ಪುಟ ೫೩ ಲಾಕ್—ಕಾಲ ೧೬೩೨—೧೭೦೪. Essay on human understanding ಎಂಬ ಗ್ರಂಥದ ಕರ್ತೃ. ದೊಡ್ಡ ಆಂಗ್ಲ ತತ್ತ್ವಜ್ಞಾನಿ.

ಪುಟ ೫೪ ಕಾರ್ಡಾನ್—ಇಟಲಿದೇಶದ ತತ್ತ್ವಜ್ಞಾನಿ. ಗಣಿತ ಶಾಸ್ತ್ರಜ್ಞ ಮತ್ತು ವೈದ್ಯ. ಕಾಲ ೧೫೦೧—೧೫೭೬.

ಪುಟ ೫೪ ಡಾ. ಮೋರ್—ತತ್ತ್ವಜ್ಞಾನಿ, ಕಾಲ ೧೬೧೪–೧೬೮೭ ,Divine Dialogues’ ಎಂಬ ಗ್ರಂಥದ ಕರ್ತೃ. ರಾಯಲ್ ಸೊಸೈಟಿಯ ಮೊದಲಿನ ಸದಸ್ಯರಲ್ಲಿ ಒಬ್ಬ.

ಪುಟ ೫೫ ಬಾಯಲ್—ಕಾಲ ೧೬೨೬—೧೬೯೦ ರಾಯಲ್ ಸೊಸೈಟಿಯ ಸ್ಥಾಪಕ. ವಿಜ್ಞಾನಿ.

ಪುಟ ೫೬ ರಾಯಲ್ ಸೊಸೈಟಿ—ಕ್ರಿ. ಶ. ೧೭ನೆ ಶತಮಾನದಲ್ಲಿ ಲಂಡನಿನಲ್ಲಿ ಸ್ಥಾಪಿಸಲ್ಪಟ್ಟ ವಿಜ್ಞಾನಿಗಳ ಸಂಘ.

ಪುಟ ೬೩ ಸೈಂಟ್ಸ್‌ಜೇಮ್ಸ್ ಪಾರ್ಕ್—ವಿಹಾರಕ್ಕೆ ಯೋಗ್ಯವಾದ ಸುಂದರವಾದ ಲಂಡನ್ನಿನ ಒಂದು ಉಪವನ. ಎರಡನೆಯ ಚಾರಲ್ಸ್ ದೊರೆ ಕಾಲಧಲ್ಲಿ ಆತ ಡಚ್ಚರ ತೋಟಗಳ ರೀತಿಯಲ್ಲಿ ಇದನ್ನು ಊರ್ಜಿತಸ್ಥಿತಿಗೆ ತಂದು ಸೊಗಸಾಗಿ ಅಳವಡಿಸಿದ್ದ.

ಪುಟ ೬೪ ರೋಸ್‌ಮಣಿ ಓಣಿ—ಲಂಡನ್ನಿನ ವೈಟ್‌ಚಾಪಲ್ ಬಳಿಯ ಓಣಿ. ಈಗ ರಾಯಲ್ ಮಿಂಟ್ ಸ್ಟ್ರೀಟ್ ಎಂದುಹೆಸರು. ಹಳೆ ಉಡಿಗೆ ತೊಡಿಗೆಗಳ ಮಾರಾಟಕ್ಕೆ ಹಿಂದೆ ಹೆಸರಾಗಿತ್ತು.

ಪುಟ ೭೭ ಬಜಾಜೆಟ್—Rowe ಎಂಬಾತ ಬರೆದ Tamerlane ಎಂಬ ನಾಟಕದಲ್ಲಿ ಬರುವ ಒಂದು ಪಾತ್ರ.

ಪುಟ ೮೦ ಸರ್ ಹ್ಯಾರಿವಿಲ್ ಡೈರ್—Farquhar ಎಂಬಾತ ಬರೆದ ಇದೇ ಹೆಸರಿನ ನಾಟಕದಲ್ಲಿ ಬರುವ ಒಂದು ಪಾತ್ರ.

ಪುಟ ೮೧ ಗ್ಯಾರಿಕ್—ಹದಿನೆಂಟನೆಯ ಶತಮಾನದ ಸುಪ್ರಸಿದ್ಧ ನಟ. ಡಾ. ಜಾನ್‌ಸನ್ನಿನ ಶಿಷ್ಯ.

ಪುಟ ೮೧ ಡ್ರೂರಿಲೇನ್—ಸುಪ್ರಸಿದ್ಧವಾದ ನಾಟಕಮಂದಿರವಿದ್ಧ ಸ್ಥಳ.

ಪುಟ ೮೩ ಮುತ್ತಜ್ಜಿ ಫೀಲ್ಡ್—ಚಾರಲ್ಸ್ ಲ್ಯಾಂಬಿನ ತಂದೆ ಜಾನ್‌ಲ್ಯಾಂಬ್; ಎಲಿಜಿಬೆತ್ ಫೀಲ್ಡ್ ಎಂಬುಕೆಯನ್ನು ಮದುವೆಯಾದ. ಅವಳ ತಾಯಿ ಮೇರಿಫೀಲ್ಡ್. ಈಕೆಯೆ, ಪ್ರಬಂಧದಲ್ಲಿ ಬರುವ ಮುತ್ತಜ್ಜಿ ಫೀಲ್ಡ್

ಪುಟ ೮೮ ಜಾನ್ ಎಲ್—ಚಾರಲ್ಸ್‌ಲ್ಯಾಂಬಿನ ಸಹೋದರ, ಈತ ೧೮೨೧ರಲ್ಲಿ ತೀರಿಕೊಂಡ,

ಪುಟ ೯೧ ಆ್ಯಲಿಸ್ ಡಬ್ಲ್ಯು-ಎನ್—ಚಾರಲ್ಸ್ ಲ್ಯಾಂಬ್ ಪ್ರೀ
ಸುತ್ತಿದ್ದ ಆ್ಯನ್ ಸೈಮನ್ಸ್ ಎಂಬಾಕೆಯನ್ನು ಆ್ಯಲಿಸ್‌ವಿಂಟರ್‌ಟನ
ಎಂದು ಇಲ್ಲಿ ಕರೆದಿದೆ.

ಪುಟ ೯೧ ಬರ್‌ಟ್ರಮ್—ಆ್ಯನ್ ಸೈಮನ್ಸ್ ಎಂಬಾಕೆಯ ಪತಿ

ಪುಟ ೯೨ ಲೀತೆ—ರಸಾತಳದಲ್ಲಿ ಇರುವುದೆಂದು ಹೇಳಲ
ಗಿರುವ ಒಂದು ನದಿ. ಭೂಲೋಕದಲ್ಲಿ ಮೃತಿ ಹೊಂದಿದವರ ಆ
ಗಳು ಇಲ್ಲಿ ಬಂದು ಮುಳುಗಿದಾಗ ಅವುಗಳ ಗತ ಜನ್ಮದ ಸ್ಮೃತಿ ಮರೆ
ಹೋಗುವುದೆಂದು ಹೇಳುತ್ತಾರೆ.

ಪುಟ ೯೨ ಬ್ರಿಡ್‌ಜೆಟ್—ಚಾರಲ್ಸ್‌ಲ್ಯಾಂಬಿನ ಸಹೋದರಿ.

---